# ಶ್ರೀ ಕೃಷ್ಣಸಂಧಾನ



ಲೇಖಕ:
ಉಡುಪಿಯ ಮೋಡರ್ನ ಹಾಯರ್ ಎಲಿಮೆಂಟರಿ ಶಾಲೆಯ ಅಧ್ಯಾಪಕ
**ಕೆ. ಬಿ. ರಾಮಕೃಷ್ಣ.**

---

*Reprint of edition approved for class by the Text Book Committee, Madras, vide page 229 of Fort St. George Gazette Part 1B dated 4th May 1937.*

---







...ಣ)

*...he Publishers.*



ಬೆಲೆ: 4 ಆಣೆ.

# ಮುನ್ನುಡಿ

ಮಹಾಭಾರತದಲ್ಲಿ ಶ್ರೀ ಕೃಷ್ಣನ ರಾಯಭಾರವು ಎಲ್ಲರಿಗೂ ತಿಳಿದಿರುವ ಅಂಶವಷ್ಟೆ! ಆ ಕಥೆಯನ್ನೆ ನಾಲ್ಕು ವರುಷಗಳ ಹಿಂದೆ ಇಲ್ಲಿನ ಗಣಪತಿ ಸೆಕೆಂಡರಿ ಶಾಲೆಯ ಮಕ್ಕಳಿಂದ ವಿಜಯದಶಮಿಯ ದಿನ ಆಡಿ ತೋರಿಸುವುದಕ್ಕಾಗಿ ನಾಟಕರೂಪವಾಗಿ ಬರೆದುದಾಗಿದೆ. ಚಿಕ್ಕ ಮಕ್ಕಳಿಗೆ ಇದರಿಂದ ಪ್ರಯೋಜನವುಂಟಾಗಬಹುದೆಂಬ ಅಭಿಪ್ರಾಯದಿಂದ ಹಲವರು ಮಿತ್ರರು ಇದನ್ನು ಅಚ್ಚುಹಾಕಿಸಿ ಪ್ರಕಟಿಸಬೇಕೆಂದು ಪ್ರೋತ್ಸಾಹಿಸಿದುದರಿಂದ, ಈ ಕಾರ್ಯಕ್ಕೆ ತೊಡಗಿರುವೆನಲ್ಲದೆ ಮತ್ತೆ ಬೇರೆಯಲ್ಲ. ಇದರಲ್ಲಿ ದೋಷಗಳು ಹಲವಿರಬಹುದು. ಆದರೂ, ರಸಿಕರಾದವರು ಇದರ ವಿಷಯದಲ್ಲಿ ಹಂಸಕ್ಷೀರ ನ್ಯಾಯದಂತೆ ವರ್ತಿಸಬೇಕೆಂಬುದೆ ನನ್ನ ಪ್ರಾರ್ಥನೆ.

ಮಂಗಳೂರು,
ತಾ. 20—2—1918.

**ಕೆ. ಬಿ. ರಾಮಕೃಷ್ಣ.**

# ಶ್ರೀ ಕೃಷ್ಣಸಂಧಾನ.



## ನಾಟಕದ ಪಾತ್ರಗಳು.

**ಕೃಷ್ಣ, ಬಲರಾಮ**—ಯಾದವ ನಾಯಕರು.

**ಧರ್ಮರಾಯ, ಭೀಮ, ಅರ್ಜುನ, ನಕುಲ, ಸಹದೇವ**—ಪಾಂಡವರು.

**ಸುಯೋಧನ**—ಕುರುರಾಜ.

**ದುಶ್ಯಾಸನ**—ಯುವರಾಜ.

**ಧೃತರಾಷ್ಟ್ರ**—ಕೌರವರ ತಂದೆ.

**ಭೀಷ್ಮಾಚಾರ್ಯ**—ಕೌರವರ ಅಜ್ಜ.

**ದ್ರೋಣಾಚಾರ್ಯ, ಕೃಪಾಚಾರ್ಯ**—ಕೌರವ ಪಾಂಡವರ ವಿದ್ಯಾ ಗುರುಗಳು.

**ಅಶ್ವತ್ಥಾಮ**—ದ್ರೋಣಾಚಾರ್ಯರ ಪುತ್ರ.

**ಕರ್ಣ**—ಕೌರವನ ಪರಮ ಮಿತ್ರ.

**ಶಕುನಿ**—ಕೌರವರ ಸೋದರಮಾವ.

**ವಿದುರ, ಸಂಜಯ**—ಮಂತ್ರಿಗಳು.

**ಪಾಂಚಾಲಿ**—ಪಾಂಡವರ ಪತ್ನಿ.

**ಕನಕಾಂಗಿ**—ವಿದುರನ ಸೋದರಸೊಸೆ.

**ಕಂಚುಕಿ.**



# ಮೊದಲನೆಯ ಅಂಕ.

## ಮೊದಲನೆಯ ಪ್ರವೇಶ.

[ಸ್ಥಳ:—ವಿರಾಟನಗರ. ಅಂತಃಪುರದಲ್ಲಿ ಪಾಂಚಾಲಿಯು ಮಂಚದ ಮೇಲೆ ಕುಳಿತಿರುವಳು.]

**ಪಾಂಚಾಲಿ**—(ಸ್ವಗತ) ಈ ಲೋಕದಲ್ಲಿ ಸಕಲ ಸೌಭಾಗ್ಯಗಳಿದ್ದರೂ ಏನು ತಾನೆ ಪ್ರಯೋಜನ? ಅನುಭವಿಸಬೇಕಾದರೆ ಪುಣ್ಯವಿರಬೇಕು! ವೀರಾಧಿವೀರರಾದ ಪತಿಗಳು! ಅದರಲ್ಲಿಯೂ ಐವರಿರುವರು! ಭೂಮಂಡಲದೊಳಗೆಲ್ಲ ಪ್ರಖ್ಯಾತನಾದ ಅರಸನ ಮಕ್ಕಳು! ಆದರೆ, ಸ್ವಸ್ಥವಾಗಿ ಕುಡಿಯುವುದಕ್ಕೆ ಒಂದು ಸೆರೆ ಗಂಜಿಗೆ ಕೂಡ ಗತಿಯಿಲ್ಲವಲ್ಲ! ದಿಗ್ದೇಶ ಸಂಚಾರಮಾಡಿ, ಕಾಡುಗುಡ್ಡೆಗಳೆಲ್ಲ ಸುತ್ತಿಸುತ್ತಿ, ಹೆರವರ ಮನೆಯಲ್ಲಿ ಸೇವಾವೃತ್ತಿಯನ್ನು ಮಾಡಿಕೊಂಡು, ದರಿದ್ರರಂತೆ ಕಾಲಹರಣ ಮಾಡಬೇಕಾಯಿತು! ಇದೆಲ್ಲ ನನ್ನ ದೌರ್ಭಾಗ್ಯವೆ ಸರಿ. ಇಲ್ಲದೆ ಹೋದರೆ ನನಗೇನು ಕಡಿಮೆ? ತಂದೆಯಾದರೂ ಅರಿಕೇಸರಿ ದ್ರುಪದರಾಜ! ಪಾಂಡು ಚಕ್ರವರ್ತಿಯ ಮಕ್ಕಳೆ ಗಂಡಂದಿರು! ಇನ್ನು ಅವರೇನು ಕಡಿಮೆಯೋ? ಒಬ್ಬನಾದರೊ ಬರಿಯ ಮಾತಿನಿಂದಲೆ ಕಲ್ಲನ್ನು ಕೂಡ ಕರಗಿಸಿಬಿಟ್ಟಾನು! ಇನ್ನೊಬ್ಬನು ಸಾವಿರ ಆನೆಗಳ ಸತ್ವವುಳ್ಳವನು! ಮೂರನೆಯವನು 'ಮೂರು ಲೋಕದ ಗಂಡು' ಎಂಬ ಹೆಸರು ಪಡೆದಿದ್ದಾನೆ! ದೇವೇಂದ್ರನಲ್ಲಿ ಕೂಡ ಅರ್ಧಾಸನ ಪಡೆದವನು! ಇನ್ನುಳಿದಿಬ್ಬರ ಸಾಮರ್ಥ್ಯವು ಅಷ್ಟಿಷ್ಟಲ್ಲ. ಮೂರು ಲೋಕದಲ್ಲಿಯೂ ಅವರನ್ನು ಜಯಿಸತಕ್ಕ ಸಮರ್ಥರಾರಿರುವರು? ಪೂರ್ವಾಪರವೆಲ್ಲ ಚೆನ್ನಾಗಿ ಬಲ್ಲವರು! ಇಂತಹ ಸಮರ್ಥರಿಗೆ ಕೂಡ ಇಷ್ಟರ ಮಟ್ಟಿನ ದುರವಸ್ಥೆಯು ಬರಬೇಕಾದರೆ—ಇದು ಕೇವಲ ಮಂದಭಾಗ್ಯೆಯಾದ—ನನ್ನ ಕೈಹಿಡಿದುದರಿಂದಲ್ಲವೆ?—ಶ್ರೀ ಕೃಷ್ಣನ ಕಾರುಣ್ಯವೊಂದಿಲ್ಲದಿರುತ್ತಿದ್ದರೆ ನಾವೇನಾಗಿ ಹೋಗುತ್ತಿದ್ದೆವೊ, ಕಾಣೆ (ತೆರೆಯ ಕಡೆ

ಆರನ್ನೋ ನೋಡುವಂತೆ ನಟಿಸಿ)-ಓಹೋ! ಏನೋ ವಿಶೇಷವಿರಬೇಕು. ವಾಯು ಪುತ್ರನು ಅವಸರದಿಂದ ಬರುತ್ತಿರುವನು. ಬಹುಶಃ ಅರ್ಧರಾಜ್ಯ ಕೇಳು ವುದಕ್ಕೆ ಹೋಗಿದ್ದ ಶತಾನಂದರು ಬಂದಿರಬೇಕು.—(ಎದ್ದು ನಿಲ್ಲುವಳು. ಭೀಮನು ಬಂದು ಮಂಚದ ಮೇಲೆ ಕುಳಿತುಕೊಳ್ಳುವನು.)

**ಭೀಮ**—ಪಾಂಚಾಲೀ, ಎಲ್ಲವೂ ಸರಿಯಾಯಿತು.

**ಪಾ**—ಏನು? ಶತಾನಂದರು ಬಂದರೇ?

**ಭೀಮ**—ಅಹುದು. ಕೌರವನು ಅರ್ಧರಾಜ್ಯ ಕೊಡುವುದಿಲ್ಲ ವಂತೆ.

**ಪಾ**—ಹಾಗಾದರೆ ಸರಿ. ಇನ್ನು ಸಪ್ತಾಕ್ಷರೀಮಂತ್ರ ಸಿದ್ಧಿಮಾಡಿ ಕೊಂಡರಾಯಿತು.

**ಭೀಮ**—ಹಾಗೆಂದರೇನು?

**ಪಾ**—"ಭ—ವ—ತಿ—ಭಿ—ಕ್ಷಾಂ—ದೇ—ಹಿ!"

**ಭೀಮ**—ಛಿ! ಬಿಡು! ಇದೇನು ಮಾತು? ಅರ್ಧರಾಜ್ಯಕ್ಕೆ ಪ್ರತಿ ಯಾಗಿ ಇಡೀ ರಾಜ್ಯವೆ ಲಭಿಸುವುದು!

**ಪಾ**—ವನರಾಜ್ಯವೆ ಸರಿ!

**ಭೀಮ**—ನಾವೇನು ಗಂಡುಸರಲ್ಲವೆಂದೆಣಿಸಿರುವೆಯಾ?

**ಪಾ**—ಅಂದೆ ಗೊತ್ತಾಗಿದೆಯಲ್ಲವೆ?

**ಭೀಮ**—ಎಂದು?

**ಪಾ**—ದುಶ್ಯಾಸನನು ಮಾನಭಂಗಮಾಡಿದಾಗ!

**ಭೀಮ**—ಛಿ! ಛಿ! ಪಾಂಚಾಲೀ, ಇಂತಹ ಮಾತು ನನ್ನೊಡನೆ ಆಡಕೂಡದು. ಅಣ್ಣಯ್ಯನಿಗೋಸ್ಕರವಲ್ಲವೆ ಅಂದು ನಾನು ಸುಮ್ಮ ನಿದ್ದುದು?—ಕೀಚಕನ ಅವಸ್ಥೆಯನ್ನಾದರೂ ಕಾಣೆಯಾ?

**ಪಾ**—ಅದು ಹಾಗಿರಲಿ; ಈಗ ಯುದ್ಧಮಾಡುವಿರೇನು?

**ಭೀಮ**—ಮಾಡದೆ ಉಂಟೆ?

**ಪಾ**—ಕೌರವನೇನು ಹೇಳಿದನಂತೆ?

**ಭೀಮ**—ಯುದ್ಧಮುಖೇನ ನ್ಯಾಯ ತೀರಬೇಕಲ್ಲದೆ ಸಂಧಿಯಾಗಲಾರದು!

**ಪಾ**—"ವಿನಾಶಕಾಲೇ ವಿಪರೀತ ಬುದ್ಧಿಃ"!

**ಭೀಮ**—ಅಲ್ಲದೆ ಮತ್ತೇನು?—ಈಗ ನನ್ನ ಪ್ರತಿಜ್ಞೆ ಪೂರೈಸುವುದಕ್ಕೆ ಅನುಕೂಲವಾದಂತಾಯಿತು.

**ಪಾ**—ಆದರೆ ಯುದ್ಧನಡೆಯುವುದೆಂದು ನಾನು ನಂಬಲಾರೆ. ನಮ್ಮಲ್ಲಾದರೂ ಬಹಳ ದೊಡ್ಡ ಪೌರಾಣಿಕರೊಬ್ಬರಿದ್ದಾರೆ! ಸಂಧಿಯ ಮಾತು ಪುನಃ ಬರುವುದಿಲ್ಲವೆಂದು ಹೇಗೆ ಗೊತ್ತು?

**ಭೀಮ**—ಇನ್ನು ಬರಲಾರದು. ಕೌರವನು ಯಾದವರ ಸಹಾಯ ಪಡೆದುಕೊಳ್ಳುವುದಕ್ಕೋಸ್ಕರ ದ್ವಾರಾವತಿಗೆ ಆಗಲೆ ಹೋಗಿರುವನಂತೆ.

**ಪಾ**—ಒಂದು ವೇಳೆ ಸಂಧಿಯ ಮಾತು ಬಂದುಬಿಟ್ಟರೆ—

**ಭೀಮ**—ಬಂದರೆ ಬರಲಿ. ನಾನು ಮಾತ್ರ ಯುದ್ಧಮಾಡುವುದೆ ಸಿದ್ಧ! ಆ ನೀಚನು ಮಾಡಿದ ದ್ರೋಹಗಳೆಲ್ಲ ನನಗಷ್ಟು ಬೇಗನೆ ಮರೆತು ಹೋದಾವೆಂದು ಭಾವಿಸಿರುವೆಯಾ? ಇದು ವರೆಗೂ ಅಣ್ಣಯ್ಯನ ಮಾತೆಂಬುದು ವೇದವಾಕ್ಯವೆಂದು ಮನ್ನಿಸುತಿದ್ದೆ. ಇದೊಂದು ವಿಷಯದಲ್ಲಿ ಮಾತ್ರ ಇನ್ನು ಕೇಳಲಾರೆ!

**ಪಾ**—ಹಾಗಾದರೆ ನನಗೆ ಮುಡಿ ಹಾಕಿಕೊಳ್ಳುವ ಯೋಗವು ಪ್ರಾಪ್ತವಾಗುವುದು!

**ಭೀಮ**—ಅದಕ್ಕೇನು ಸಂದೇಹ?

**ಪಾ**—ಈಗ ಯುದ್ಧಮಾಡುವುದಾದರೆ ಸಹಾಯಕರಾರಿದ್ದಾರೆ?

**ಭೀಮ**—ಸಹಾಯಕರೆ? ಏಕೆ? ನಾನೊಬ್ಬ ಸಾಲದೆ? ಅರ್ಜುನನೂ ದ್ವಾರಾವತಿಗೆ ಹೋಗಿದ್ದಾನೆ.

**ಪಾ**— ಹಾಗಾದರೆ ನಮ್ಮ ಕಾರ್ಯವು ಕೈಗೂಡಿದಂತೆಯೆ ಸರಿ. ಕೃಷ್ಣನೊಬ್ಬನಿದ್ದರೆ ಸಾಕು!

**ಭೀಮ**— ಇರಲಿ. ಈಗ ಆಸ್ಥಾನಕ್ಕೆ ಹೋಗಬೇಕು. ಮೊದಲು ನಿನಗೆ ತಿಳಿಸಿಬಿಡೋಣವೆಂದು ಬಂದೆ.

(ಭೀಮನು ಹೋಗುತ್ತಿರುವನು.)

**ಪಾ**— ನಾನಿಷ್ಟರ ಮಟ್ಟಿನ ಅನುಗ್ರಹಕ್ಕೂ ಅರ್ಹಳೇ?

---

## ಎರಡನೆಯ ಪ್ರವೇಶ.

---

[ಸ್ಥಳ—ದ್ವಾರಾವತಿ. ನಿದ್ರಿಸುತ್ತಿರುವ ಕೃಷ್ಣ.]

**ಸುಯೋಧನ**—(ಪ್ರವೇಶಿಸಿ, ಕೃಷ್ಣನನ್ನು ನೋಡಿ ತನ್ನಲ್ಲಿಯೆ)— ಆಹಾ ಇದೊ! ಲಕ್ಷಪತಿಗಿಂತಲೂ ಭಿಕ್ಷಪತಿಯೆ ಮೇಲು! ಈ ಕೃಷ್ಣನು ಹೇಗೆ ನಿದ್ರಿಸುತಿದ್ದಾನೆ! ನನಗಂತೂ ಮೊನ್ನೆಯಿಂದ ಕಣ್ಣಾಲಸ್ಯ ಕೂಡ ಆಗುವುದಿಲ್ಲ. ರಾತ್ರಿಯೆಲ್ಲ ಯುದ್ಧದ ಯೋಚನೆಯೆ! ಈತನಿಗಾದರೊ ಆವುದೊಂದು ಯೋಚನೆಯೂ ಇಲ್ಲ. ತಿನ್ನುವುದಕ್ಕೆ ಬೇಕಾದಷ್ಟು ಇದೆ. ರಾಜ್ಯಕಾರ್ಯವನ್ನೆಲ್ಲ ಬಲರಾಮನು ನಿರ್ವಹಿಸುತ್ತಾನೆ! ಈತನು ಸರ್ವದಾ ಭೋಗದಲ್ಲಿಯೆ ಕಾಲಹರಣ ಮಾಡುತ್ತಿರುವನು. ಜನರೆಲ್ಲರೂ ಈತನು ಸಾಕ್ಷಾತ್ ಭಗವಂತನೆಂದು ಭ್ರಮಿಸುತ್ತಾರೆ!— ಅದರಲ್ಲೇನೂ ಸಂದೇಹವಿಲ್ಲ. ಅಮಾನುಷವಾದ ಕಾರ್ಯವನ್ನು ಕೂಡ ಮಾಡಬಲ್ಲನು. ಬಲರಾಮನು ಕೂಡ ಈತನ ಪರಾಮರ್ಶವಿಲ್ಲದೆ ಆವ ಕಾರ್ಯದಲ್ಲಿಯೂ ಪ್ರವರ್ತಿಸುವುದಿಲ್ಲ! ಇಲ್ಲವಾದರೆ, ನಾನೇಕೆ ಈತನ ಬಳಿಗೆ ಬರುತಿದ್ದೆ? ಹೇಗಾದರೂ ಮಾಡಿ, ಈತನನ್ನು ವಶಮಾಡಿಕೊಂಡುಬಿಟ್ಟರೆ, ಬಲರಾಮನು ಕೂಡ ವಶನಾದಂತೆಯೆ ಸರಿ. (ಹತ್ತಿರ ಹೋಗಿ ಕೃಷ್ಣನ ಮುಖವನ್ನು ನೋಡಿ, ಹಿಂದೆ ಬಂದು)— ಈಗ ನಾನು ಹೇಗೆ ವರ್ತಿಸಬೇಕೊ ಗೊತ್ತಾಗು

ವುವಿಲ್ಲ. ಈತನನ್ನು ಎಚ್ಚರಗೊಳಿಸಲೆ? ಒಂದು ವೇಳೆ ಸಿಟ್ಟುಗೊಂಡರೆ, ನನ್ನ ಶ್ರಮವೆಲ್ಲ ನಿರರ್ಥಕವಾಗುವುದು! ಸರಿ, ತಾನಾಗಿಯೆ ಏಳಲಿ! (ತೆರೆಯು ಕಡೆಗೆ ನೋಡಿ)—ಓಹೊ. ಅರ್ಜುನನು ಕೂಡ ಬಂದುಬಿಟ್ಟನು! ಕೃಷ್ಣನು ಆತನನ್ನೆ ಮೊದಲು ಕಂಡು, ಆತನಿಗೆ ಸಹಾಯಮಾಡುವುದಾಗಿ ಒಪ್ಪಿಕೊಂಡು ಬಿಟ್ಟರೆ, ನನ್ನ ಕಾರ್ಯ ಕೆಟ್ಟಂತಾಯಿತು. ಎಚ್ಚರ ಗೊಂಡೊಡನೆಯೆ ನನ್ನನ್ನೆ ನೋಡಬೇಕು. ಆದುದರಿಂದ—(ಕೃಷ್ಣನ ಕಾಲ ಬಳಿಗೆ ಹೋಗುತ್ತ)—ನಾನಿಲ್ಲಿ ಕುಳಿತುಕೊಂಡರೆ ಸರಿಯಾಗುತ್ತೆ. (ಕುಳಿತು ಕೊಳ್ಳುವನು. ತಟ್ಟನೆ ಎದ್ದು ದೂರ ಸರಿದು)—ನಾನು ರಾಜಾಧಿರಾಜ! ಈತನು ಕೇವಲ ಗೋವಳನು! ಅದಾಗಲಾರದು. ಕಾಲುದೆಸೆಯಲ್ಲಿ ಕುಳಿತು ಕೊಂಡರೆ—ನನಗೆ ತುಂಬ ಅವಮಾನ! ತಲೆದೆಸೆಯಲ್ಲಿ ಕುಳಿತುಕೊಂಡು ಬಿಡುವೆನು. ಕಣ್ಣು ತೆರೆದೊಡನೆಯೆ ನನ್ನ ಮುಖ ಕಾಣಿಸಬೇಕು! (ಕುಳಿತುಕೊಳ್ಳುವನು.)

**ಅರ್ಜುನ**—(ಪ್ರವೇಶಿಸಿ ಕೃಷ್ಣ ಸುಯೋಧನರನ್ನು ನೋಡದೆ ತನ್ನಲ್ಲಿಯೆ)— ಆಹಾ! ನಾನೆಷ್ಟು ಬೇಗನೆ ಬಂದರೂ ನನ್ನಿಂದ ಮುಂಚಿತವಾಗಿಯೆ ಅಣ್ಣಯ್ಯನು ಬಂದಿರುತ್ತಾನಂತೆ. ಹಾದಿಯಲ್ಲಿ ನನಗೆ ಶುಭಶಕುನಗಳಾದು ವೇನೊ ನಿಜ! ಭಗವಂತನ ವ್ಯಾಪಾರವು ಹೇಗಿದೆಯೊ, ತಿಳಿಯದು. ಅಣ್ಣಯ್ಯನಿಗೆ ಏನು ಉತ್ತರ ಹೇಳಿಬಿಟ್ಟನೊ? ಒಳ್ಳೆಯದು, ಈಗಲೆ ತಿಳಿಯುವುದು. (ಕೃಷ್ಣ ಸುಯೋಧನರನ್ನು ನೋಡಿ ಸಂತೋಷದಿಂದ)—ಚೆನ್ನಾ ಯಿತು, ಚೆನ್ನಾಯಿತು! ಭಗವಂತನು ನಿದ್ರಿಸುತ್ತಾನೆ. ಅಣ್ಣಯ್ಯನು ನಿದ್ರಾಭಂಗ ಮಾಡದೆ, ತಲೆದೆಸೆಯಲ್ಲಿ ಕುಳಿತಿದ್ದಾನೆ! ನನ್ನಂತಹ ಅಲ್ಪನು ಆ ಪರಮಾತ್ಮನ ಕಾಲುಬುಡದಲ್ಲಿ ನಿಲ್ಲುವುದೆ ಯುಕ್ತ! (ಕಾಲುಬುಡದಲ್ಲಿ ನಿಲ್ಲುವನು.)

**ಕೃಷ್ಣ**—(ಎಚ್ಚರಗೊಂಡು ಅರ್ಜುನನನ್ನು ಕಂಡು)—ಅರ್ಜುನಾ, ಸುಖಾ ಗಮನವೆ? ಈಗ ತಾನೆ ಬಂದೆಯಾ?

**ಅರ್ಜುನ**—ಕೃಷ್ಣಾ, ಅಣ್ಣಯ್ಯ ಬಂದಿರುತ್ತಾನಲ್ಲ!

**ಕೃಷ್ಣ**—(ಸುಯೋಧನನನ್ನು ನೋಡಿ)—ಕೌರವೇಶ್ವರನೆ! ಏನು ಭಾವ ಯ್ಯಾ, ಕ್ಷೇಮವೆ? ಬಹಳ ಅಪರೂಪ!

**ಸುಯೋ**—ಅಪರೂಪವೆ ಸರಿ!

**ಕೃಷ್ಣ**—ಬಂದು ಬಹಳ ಹೊತ್ತಾಯಿತೊ ಏನೊ? ಎಬ್ಬಿಸಬಾರದಿತ್ತೆ?

**ಸುಯೋ**—ನಿದ್ರಾಭಂಗ ಮಾಡುವುದಕ್ಕೆ ಮನಸ್ಸು ಬರಲಿಲ್ಲ.

**ಕೃಷ್ಣ**—ಅದರಲ್ಲೇನು?—ಈಗ ನೀವಿಬ್ಬರೂ ಜತೆಯಾಗಿ ಬಂದುದು ನೋಡಿ ನನಗೆ ತುಂಬ ಸಂತೋಷವಾಯಿತು. ಅಂದು ಪಾಂಡವರನ್ನು ಅಡವಿಗಟ್ಟಿದಾಗ, ಕೌರವನು ತುಂಬ ಕ್ರೂರನೆಂದೆಣಿಸಿದ್ದೆ. ಈಗ ನಿಮ್ಮೊಳಗೆ ಇಂತಹ ಮಿತ್ರತ್ವವುಂಟಾದುದು ಕೇವಲ ಆಶ್ಚರ್ಯವೆ ಸರಿ! ಎಷ್ಟೆಂದರೂ ಒಡಹುಟ್ಟಿದವರಲ್ಲವೆ? ಮಾಯಾಪಾಶವು ಹೇಗೆ ತಾನೆ ಹರಿದುಹೋದೀತು? ಪ್ರಸ್ತುತಃ ನೀವೇನು ನಿಮಿತ್ತ ಇಲ್ಲಿ ತನಕ ದಯಮಾಡಿಸಿದಿರಿ? ನನ್ನಿಂದಾಗತಕ್ಕದೇನಾದರಿದೆಯೆ? ಆಜ್ಞೆಯಾಗಲಿ.

**ಸುಯೋ**—ಕೃಷ್ಣಾ, ಏತಕ್ಕೋಸ್ಕರ ಇಷ್ಟೆಲ್ಲ ಉಪಚಾರ ಹೇಳುವೆ? ಉಪಚಾರವೆಲ್ಲ ಹಾಗಿರಲಿ. ನಾವು ದಾಯವಾದಿಗಳು ಎಂದಾದರೂ ಸೇರುವುದುಂಟೆ? ರಾಜ್ಯಕ್ಕೋಸ್ಕರ ಯುದ್ಧಮಾಡುತ್ತೇವೆ! ಜಯಾಪಜಯಗಳು ನೀನೆ ಬಲ್ಲೆ. ಆದರೆ, ನಮ್ಮಿಬ್ಬರಿಗೂ ನೀನು ಸಹಾಯಕನಾಗಬೇಕು!

**ಕೃಷ್ಣ**—(ಕಿವಿ ಮುಚ್ಚಿಕೊಂಡು)—ಶಿವಶಿವಾ! ಇದನ್ನು ನಾನು ಕೇಳಲಾರೆ. ನೆಲದಾಸೆಗಾಗಿ ಹೊಡೆದಾಡಿಕೊಳ್ಳುವುದುಂಟೆ? ಈ ಭೂಮಿಯಿಂದೇನಾದೀತು? ಇದೇನು ಸ್ಥಿರವಾಗಿರುವುದೇ? ಇಂದಿಗಿದ್ದರೆ, ನಾಳೆಗಿಲ್ಲ. ನೀವೆರಡು ಪಕ್ಷದವರೂ ಒಂದಾಗಿ ಸಂತೋಷದಿಂದಿದ್ದರೆ, ನಾವೆಲ್ಲರೂ ಕಣ್ಣುತುಂಬ ನೋಡಿ ಆನಂದಪಟ್ಟೇವು. ನಿಮ್ಮ ಮಾತು ಕೇಳಿದರೆ—ಏನೊ ಭ್ರಮೆಗೊಂಡವರಂತೆ ಕಾಣಿಸುತ್ತೀರಿ. ಈಗ ನೀವು ಕಾದಾಡಿಕೊಂಡರೆ ಅಪಕೀರ್ತಿ ಬರುವುದಿಲ್ಲವೆ? ಆವ ಮುಖದಲ್ಲಿ ಲೋಕವನ್ನು ಕಾಣುವಿರಿ?

**ಸುಯೋ**—ಕೃಷ್ಣಾ, ಸಾಕು; ನಾವು ನಿನ್ನ ಹತ್ತಿರ ಧರ್ಮಶ್ರವಣ ಮಾಡುವುದಕ್ಕೆ ಬರಲಿಲ್ಲ, ಬಲ್ಲೆಯಾ? ಕ್ಷಾತ್ರಧರ್ಮವು ನಮಗೆ

ಚೆನ್ನಾಗಿ ,ತಿಳಿದಿರುವುದು. ನೀನೆಷ್ಟು ಹೇಳಿದರೂ ಬಂಡೆಗಲ್ಲಿನ ಮೇಲೆ ನೀರು ಸುರಿದಂತೆಯೇ ಸರಿ! ನಾವು ಕಾದಾಡುವುದೇನೊ ನಿಶ್ಚಯ. ನಮ್ಮಿಬ್ಬರಿಗೂ ನೀನು ಬೆಂಬಲನಾಗಬೇಕು! ಸಾಧ್ಯವಿದೆಯೆ, ಹೇಳು ನೋಡೋಣ?

**ಕೃಷ್ಣ**— ಅರ್ಜುನಾ, ನಿನ್ನ ಅಭಿಪ್ರಾಯವೇನು?

**ಅರ್ಜುನ**— ಅಣ್ಣಯ್ಯನ ಅಭಿಪ್ರಾಯವೆ ನನ್ನ ಅಭಿಪ್ರಾಯ. ನೀನು ಅನುಗ್ರಹಿಸಿದರಾಗಬಹುದು!

**ಕೃಷ್ಣ**— ನಾನೇನು ಅನುಗ್ರಹಿಸಲಿ? ಹಿಂದೆ, ಏನೊ ಕೆಲವರು ದೈತ್ಯರನ್ನು ನಾನು ಸಂಹರಿಸಿದುದು ನಿಜ. ಆದರೆ, ಅದೆಲ್ಲ ಅಣ್ಣಯ್ಯನಿಲ್ಲದಿದ್ದರಾಗುತ್ತಿತ್ತೆ? ಶತ್ರುಗಳೊಂದಿಗೆ ನಾನೇನು ತಾನೆ ಮಾಡಿಯೇನು? ಅದರಲ್ಲಿಯೂ ನಾನು ಏಕಾಂಗಿ. ಸೈನ್ಯ, ದ್ರವ್ಯ ಮುಂತಾದುವೆಲ್ಲ ಅಣ್ಣಯ್ಯನಲ್ಲಿರುವುದು. ಹೀಗಿರುವಾಗ ನಾನೇನು ಸಹಾಯ ಮಾಡಲಿ?

**ಅರ್ಜುನ**— ಅದೊಂದೂ ನನಗೆ ತಿಳಿಯದು. ನಮಗೆ ಸಹಾಯವಾಗಬೇಕು.

**ಕೃಷ್ಣ**— ಹಾಗಾದರೆ ಕೇಳು. ನಾನೊಬ್ಬ ಒಂದು ಪಕ್ಷ; ಸಕಲ ಸೇನೆ, ದ್ರವ್ಯ ಮುಂತಾದುದರೊಡನೆ ಅಣ್ಣಯ್ಯನೊಂದು ಪಕ್ಷ; ನಿನಗೆ ನಮ್ಮಲ್ಲಿ ಆರಾದೀತು, ಹೇಳು ನೋಡೋಣ?—(ಸುಯೋಧನನನ್ನು ನೋಡಿ) ಭಾವಯ್ಯನಿಗಾರಾದೀತು?

**ಸುಯೋ**— ಚಿಕ್ಕವನು ಅರ್ಜುನನಿದ್ದಾನೆ. ಆತನೆ ಮೊದಲು ಆರಿಸಿಕೊಳ್ಳಲಿ! ಉಳಿದವನು ನನ್ನ ಪಕ್ಷಕ್ಕಾದರೆ ಸರಿ.

**ಕೃಷ್ಣ**— ಅರ್ಜುನಾ, ನಿನಗಾರಾದೀತು?

**ಅರ್ಜುನ**— ಕೃಷ್ಣಾ, ನಾವು ದರಿದ್ರರು. ಬಲರಾಮನು ತನ್ನ ಸಮುದ್ರದಂತಿರುವ ಸೈನ್ಯ ಸಮೇತ ಬಂದರೆ, ನಾವು ಅವರನ್ನು ಹೇಗೆ ಸುಧಾರಿಸಬಲ್ಲೆವು? ಬಡವರಿಗೆ ಬಡವರೆ ಸಹಾಯ! ನೀನೆ ನಮ್ಮ ಪಕ್ಷಕ್ಕಿದ್ದು ಬಿಡು!

**ಸುಯೋ**—(ಸಂತೋಷವನ್ನೂ ಅಸಹ್ಯತೆಯನ್ನೂ ತೋರ್ಪಡಿಸುತ್ತ ಎದ್ದು) ಸರಿ, ಯೋಗ್ಯತೆಗೆ ತಕ್ಕ ಕೆಲಸ! ಚಿಂತಿಲ್ಲ. ಬಲರಾಮನೆ ನಮ್ಮ ಪಕ್ಷ ಕ್ಕಿರಲಿ; ಆದರೆ, ಕೃಷ್ಣಾ, ನೀನು ಮಾತ್ರ ಚಕ್ರ ಹಿಡಿಯಕೂಡದು!

**ಕೃಷ್ಣ**—ಆಗಲಿ, ಆದರಿಂದೇನಾದೀತು?

**ಸುಯೋ**—ಒಳ್ಳೆಯದು, ನನ್ನ ಕಾರ್ಯವಾಯಿತು. ಈಗ ಬಲ ರಾಮನಲ್ಲಿಗೆ ಹೋಗಬೇಕು.

**ಕೃಷ್ಣ**—ಇಷ್ಟು!(ಸುಯೋಧನನು ಹೋಗುತ್ತಾನೆ)—ಅರ್ಜುನಾ, ಏನು ಮಾಡಿಬಿಟ್ಟೆ? ಕತ್ತಿಯನ್ನು ಬಿಟ್ಟು ಬರಿಯ ಒರೆಯನ್ನಿಟ್ಟುಕೊಳ್ಳಬಹುದೆ? ಅಣ್ಣಯ್ಯನನ್ನೇಕೆ ಕೇಳಿಕೊಳ್ಳಲಿಲ್ಲ? ನನ್ನೊಬ್ಬನಿಂದೇನಾದೀತು? ಸುದ ರ್ಶನ ಕೂಡ ಹಿಡಿಯಕೂಡದಂತೆ! ವೀರಾಧಿವೀರರಾದ ಯಾದವರೆಲ್ಲ ಕೌರವನ ಸಹಾಯಕ್ಕಾದರು! ನೀನು ಸ್ವಲ್ಪವಾದರೂ ಯೋಚಿಸದೆ ಹೇಳಿ ಬಿಡುವುದೇ?

**ಅರ್ಜುನ**—ಕೃಷ್ಣಾ, ಈ ಕಪಟ ಮಾಯೆಯೆಲ್ಲ ಆರೊಡನಾದೀತು? ನಿನ್ನ ಸಂಗತಿಯು ನನಗೆ ಚೆನ್ನಾಗಿ ತಿಳಿದಿರುವುದು. ನೀನೊಬ್ಬನಿದ್ದರೆ ಸಾಕು!

**ಕೃಷ್ಣ**—ನಿನಗೇನೊ ಭ್ರಮೆ. ಧರ್ಮನೇನೆಂದಾನು?

**ಅರ್ಜುನ**—ಆತನಿಗೆ ತುಂಬ ಸಂತೋಷವಾದೀತು, ನಿನ್ನ ಮಹಿಮೆ ಯನ್ನರಿಯದವನಲ್ಲ! ಮೂರು ಲೋಕಗಳೂ ನಿನ್ನ ಆಜ್ಞಾಮಾತ್ರದಲ್ಲಿವೆ! ಅಂದ ಮೇಲೆ ನಿನ್ನಂತಹ ಕಾರಣಿಕ ಪುರುಷನೆ ನಮ್ಮಲ್ಲಿರುವಾಗ ನಮಗೆ ಅಪಜಯವೆಂದರೇನು?

**ಕೃಷ್ಣ**—ಯುದ್ಧಮಾಡುವುದಕ್ಕೆ ನನ್ನಿಂದ ಸಾಧ್ಯವಿಲ್ಲ. ಆವ ಕೆಲಸ ಮಾಡಲಿ?

**ಅರ್ಜುನ**—ಹೇಳಲೆ? ಕೋಪಿಸಿಕೊಳ್ಳಬಾರದು.

**ಕೃಷ್ಣ**—ಅದರಲ್ಲಿ ಕೋಪವೇನು? ನನ್ನಿಂದಾಗುವುದು ನಾನು ಮಾಡಲೆಬೇಕಷ್ಟೆ?

**ಅರ್ಜುನ**—(ಮೊಣಕಾಲೂರಿ ಕೈಮುಗಿದು)—ಬೇರೇನು ಕೆಲಸವೂ ಬೇಡ; ನನಗೆ ಸಾರಥಿತ್ವಮಾಡಬೇಕು! ಇದುವೆ ನನ್ನ ಪ್ರಾರ್ಥನೆ!

**ಕೃಷ್ಣ**—(ಸಿಟ್ಟುಗೊಂಡವನಂತೆ ಎದ್ದು)—ಶಹಭಾಸ್ ಅರ್ಜುನಾ, ಶಹಭಾಶ್! ಚಂದ್ರವಂಶದವರೂ ಮಹಾ ಧರ್ಮಿಷ್ಟರೂ ಎಂದೆಣಿಸಿ, ಅನೇಕ ಸಾರಿ ನಿಮಗೆ ಸಹಾಯಮಾಡಿದೆ! ಅದೂ ಸಾಲದೆ ನಮ್ಮ ಅತ್ತೆಯ ಮಗ ನೆಂದು ನಿನಗೆ ಸುಭದ್ರೆಯನ್ನು ಕೂಡ ಮದುವೆ ಮಾಡಿಸಿಕೊಟ್ಟೆ! ಒಳ್ಳೆಯ ಕೆಲಸ ನಿಯಮಿಸಿದೆ! "ಅಲ್ಪರ ಸಂಗ, ಅಭಿಮಾನ ಭಂಗ"! ನಿಮ್ಮಂತಹ ಅಲ್ಪರ ಸಹವಾಸ ಮಾಡಿ ಮಾನ ಕೂಡ ಕಳೆದುಕೊಳ್ಳಬೇಕೆಂದು ಹೇಳುವೆಯಾ?

**ಅರ್ಜುನ**—ಕೃಷ್ಣಾ, ಕ್ಷಮಿಸು, ಕ್ಷಮಿಸು! ನನ್ನ ಮಾತು ತೆಗೆದು ಹಾಕಬಾರದು. ನೀನು ಅದೊಂದು ಕೆಲಸ ಮಾಡಿದೆಯೆಂದರೆ, ಜಯ ಲಕ್ಷ್ಮಿಯು ನಮ್ಮ-ಕೈಸೇರುವಳು. ಇನ್ನು ನಿನ್ನ ಚಿತ್ತ!

**ಕೃಷ್ಣ**—ಆಗಲಿ, ನೀನು ಧೈರ್ಯವಾಗಿರು. ನನ್ನಿಂದಾಗುವ ಸಹಾಯ ಮಾಡುತ್ತೇನೆ.

**ಅರ್ಜುನ**—ಹಾಗಾದರೆ ನಾನು ಕೃತಾರ್ಥನೆ ಸರಿ. ನಾವಿನ್ನು ಸಾವಕಾಶ ಮಾಡಕೂಡದು. ಕೂಡಲೇ ಹೊರಡಬೇಕು.

**ಕೃಷ್ಣ**—ಆಗಲಿ, ನಾಳೆಯೆ ಹೊರಡೋಣವಂತೆ.

---

# ಮೂರನೆಯ ಪ್ರವೇಶ.

---

[ಸ್ಥಳ—ಅರಮನೆಯ ಮುಂದುಗಡೆ. ಬಲರಾಮನ ಪ್ರವೇಶ.]

**ಬಲರಾಮ**—(ಸ್ವಗತ)—ಕೌರವೇಶ್ವರನು ದ್ವಾರಾವತಿಗೆ ಬಂದಿರು ವನಂತೆ. ಆದರೆ, ಆತನು ಬಂದವನೆ ನಮ್ಮಲ್ಲಿಗೆ ಬಾರದೆ, ನೆಟ್ಟಗೆ ಕೃಷ್ಣ ನಲ್ಲಿಗೆ ಹೋಗುವುದಕ್ಕೇನು ಕಾರಣ? ಅಂದು ಗದಾಯುದ್ಧ ಕಲಿಸಿದಾಗ

ನಾನಾತನ ಗುಣಗಳೆಲ್ಲವನ್ನೂ ಚೆನ್ನಾಗಿ ಕಂಡುಕೊಂಡಿದ್ದೇನೆ. ನನ್ನಲ್ಲಿ ಆತನಿಗೆ ತುಂಬ ವಿಶ್ವಾಸ. ನನಗೆ ಕೂಡ ಆತನಲ್ಲಿ ಎಷ್ಟರ ಮಟ್ಟಿನ ಪ್ರೀತಿಯಿದೆ ಎಂಬುದು ಆತನಿಗೆ ಸ್ಪಷ್ಟವಾಗಬೇಕಿತ್ತು. ಏಕೆ? ಗದಾಯುದ್ಧ ಕಲಿಸುವ ವಿಷಯದಲ್ಲಿ ನಾನಾತನ ಪಕ್ಷಪಾತಿಯಾಗಿದ್ದುದು ಕೂಡ ತಿಳಿಯದೆ? ನಮ್ಮ ಸಹೋದರಿ ಸುಭದ್ರೆಯ ವಿವಾಹದಲ್ಲಿ ಆತನಿಗೋಸ್ಕರ ನಾನು ಮಾಡಿದ ಸಾಹಸಗಳಾದರೂ ಅಷ್ಟು ಬೇಗನೆ ಮರೆತುಹೋಗಲಾರವು!—ಕೃಷ್ಣನು ಕೇವಲ ವೈರಿ! ಏತಕ್ಕಾಗಿ ಆತನ ಬಳಿಗೆ ಹೋಗಬೇಕು?—ಏನೋ ಗಹನವಾದ ಕಾರ್ಯಸಾಧನೆಯಾಗಬೇಕಾಗಿರಬಹುದು! ಒಂದು ವೇಳೆ ಹಾಗಿದ್ದರೆ ಅದಕ್ಕೆ ಕೃಷ್ಣನೇಕೆ? ಆತನಿಂದೇನಾದೀತು? ಸಕಲ ಸಹಾಯವೂ ನನ್ನಲ್ಲಿರುವುದು. ಕೃಷ್ಣನು ಕೂಡ ನನ್ನ ಆಜ್ಞಾಧಾರಿ!--ಎಷ್ಟೆಂದರೂ ಅರಸರ ಚಿತ್ತವು ಸ್ಥಿರವಲ್ಲ! ಅಷ್ಟು ಅನ್ಯೋನ್ಯವಾಗಿದ್ದು, ಈಗ ಮಾತ್ರ ನನ್ನಲ್ಲಿಗೆ ಬಾರದಿದ್ದರೆ—ನನ್ನ ಮಾನಕ್ಕೆ ಕುಂದಲ್ಲವೆ? ಇಷ್ಟಾದರೂ ಜ್ಞಾಪಕಕ್ಕೆ ಬಾರದೆ ಹೋಯಿತು! ರಾಜ್ಯಮದ! (ಆಲೈಸಿ)-ಏನೊ ಕಾಲಸಪ್ಪಳು ಕೇಳಿಸುವಂತಿದೆ. ಆರೊ ಈ ಕಡೆ ಬರುತ್ತಿರಬೇಕು.—ಓಹೊ! ಕೌರವನೆ ಬಂದುಬಿಟ್ಟನು. ಈಗ ನಾನು ಕೊಂಚ ಕೊಂಚ ಕೋಪಿಸಿಕೊಂಡವನಂತೆ ನಟಿಸಬೇಕು. ಮುಂದಕ್ಕಾದರೂ ಆತನಿಗೆ ಬುದ್ಧಿಬಂದೀತು.

[ಸುಯೋಧನನು ಪ್ರವೇಶಿಸುವನು.]

**ಬಲ**—ಏನು, ಸುಯೋಧನಾ? ನಮ್ಮನ್ನಷ್ಟು ಬೇಗನೆ ಮರೆತು ಬಿಟ್ಟೆಯಲ್ಲವೆ?

**ಸುಯೋ**—ಮಾವಾ, ಏನು ಮಾತು? ಮರೆತು ಬಿಡುವುದೆಂದರೆ ಹೇಗಾದೀತು?

**ಬಲ**—ನಿನ್ನಂತಹ ರಾಜಾಧಿರಾಜರಿಗೆ ನಮ್ಮಂತಹ ಬಡವರು ಹೇಗೆ ತಾನೆ ಕಾಣಿಸಿಕೊಂಡಾರು?

**ಸುಯೋ**—ಇಷ್ಟೆಲ್ಲ ನಂಜಿನ ಮಾತುಗಳೇಕೆ? ನಾನು ಮಾಡಿರುವ ಅಂತಹ ಅಪರಾಧವಾವುದು?

**ಬಲ**— ಅಪರಾಧವೆ? ನಿಮ್ಮಂತಹ ನೀತಿವಂತರು ಎಂದಾದರೂ ತಪ್ಪಿ ಬೀಳುವುದಿದೆಯೆ? ನೀವು ಮಾಡುವುದೆಲ್ಲ ನಿಮಗೆನೆ ಚಂದ!

**ಸುಯೋ**— ಏನಪ್ಪ! ನನಗೊಂದೂ ಅರ್ಥವಾಗುವುದಿಲ್ಲ.

**ಬಲ**— ಹೇಗೆ ತಾನೆ ಅರ್ಥವಾದೀತು? ನಿಮ್ಮ ನಿಮ್ಮ ಕಾರ್ಯ ಸಾಧನೆಯಾಗುವ ತನಕ ನಾವೆಲ್ಲರೂ ಬೇಕು. ಆ ಮೇಲೆ ನಮ್ಮನ್ನಾರು ಕೇಳುವರು?

**ಸುಯೋ**— ರಾಮಾ, ನಾನೇನು ತಪ್ಪುಮಾಡಿದ್ದರೂ ಕ್ಷಮಿಸ ಬೇಕು. ನೀನೇನು ಹೇಳುತ್ತಿರುವೆ? ಕೊಂಚ ವಿಶದವಾಗಿ ಹೇಳು, ನೋಡೋಣ.

**ಬಲ**— ಹಾಗಾದರೆ ಕೇಳು. ನೀನು ದ್ವಾರಾವತಿಗೆ ಬಂದವನು ನೆಟ್ಟಗೆ ನನ್ನಲ್ಲಿಗೆ ಬಾರದೆ, ಆ ಕೃಷ್ಣನಲ್ಲಿಗೇತಕ್ಕಾಗಿ ಹೋದೆ? ಬೆಣ್ಣೆಯ ಆಸೆಯಾಯಿತೆ? ಇಲ್ಲವೆ ಚೋರತ್ವ ಕಲಿತುಕೊಳ್ಳುವುದಕ್ಕೆತ್ತೆ?

**ಸುಯೋ**— ಇಷ್ಟೆ ತಾನೆ! ಹಾಗಾದರೆ ಕೇಳು. ಪಾಂಡವರಿಗೂ ನನಗೂ ರಾಜ್ಯಕ್ಕೋಸ್ಕರ ಯುದ್ಧವಾಗುವುದಕ್ಕಿದೆ!

**ಬಲ**— ಯುದ್ಧವಾಗುವುದಾದರೆ ಕೃಷ್ಣನಿಂದೇನು ಸಹಾಯ ವಾದೀತು?

**ಸುಯೋ**— ಅದು ನನಗೆ ಮೊದಲೆ ಗೊತ್ತಿದೆ! ಆದರೆ 'ದುರ್ಜನಂ ಪ್ರಥಮಂ ವಂದೇ ಸಜ್ಜನಂ ತದನಂತರಂ' ಎಂದಿರುವುದು. ಹಾಗಲ್ಲವೆ? ಆತನು ಮಹಾ ಕುಟಿಲಬುದ್ಧಿಯುಳ್ಳವನು. ಏನಾದರೂ ಕುತಂತ್ರಗಳನ್ನು ನಡಿಸಿದನೆಂದರೆ ನಮ್ಮ ಕಾರ್ಯಕ್ಕೆ ಭಂಗ ಬಂದೀತು! ಆದುದರಿಂದ ಆತ ನನ್ನೆ ಮೊದಲು ಹೋಗಿ ನೋಡಿ ಬಂದುಬಿಟ್ಟೆ!

**ಬಲ**— ನಾನಿರುವಾಗ ಆತನ ಕುತಂತ್ರವೊಂದೂ ನಡೆಯಲಾರದು!

**ಸುಯೋ**— ಇನ್ನೇನೂ ಸಾಧ್ಯವಿಲ್ಲ. ಆತನ ಮಾತುಗಳಿಂದಲೆ ಆತನನ್ನು ಕಟ್ಟಿಬಿಟ್ಟೆ! ಅರ್ಜುನನು ಕೂಡ ಬಂದಿದ್ದನು. ಕೃಷ್ಣನೊಬ್ಬನು ಮಾತ್ರ ಪಾಂಡವರ ಪಕ್ಷ. ಯಾದವ ಸೈನ್ಯವೂ ನೀನೂ ನಮ್ಮ ಪಕ್ಷ.

ಅಷ್ಟು ಮಾತ್ರವಲ್ಲ. ಕೃಷ್ಣನು ಚಕ್ರ ಕೂಡ ಹಿಡಿಯುವುದಿಲ್ಲವೆಂದು ಒಪ್ಪಿಕೊಂಡಿದ್ದಾನೆ! ನಮಗಿನ್ನೇನಾಗಬೇಕು, ಹೇಳು?

**ಬಲ**— ಹಾಗಾದರೆ ಸರಿ. ಪಾಂಡವರು ನಾಶವಾಗಿ ಮೂರು ದಿವಸ!

**ಸುಯೋ**— ಮತ್ತೇನು? ಬರಿಯ ಕೈಯಲ್ಲಿ ಕೃಷ್ಣನು ಮಾಡುವುದೇನು?

**ಬಲ**— ಒಳ್ಳೆಯದು ಮಾಡಿದೆ. ನಮ್ಮ ಸೈನ್ಯವೆಲ್ಲವನ್ನೂ ಸಿದ್ಧ ಮಾಡಿಡುತ್ತೇನೆ. ಸಮಯ ಬಂದಾಗ ತಿಳಿಸಿಬಿಡು.

**ಸುಯೋ**— ಹಾಗೆಯೇ ಸರಿ.

**ಬಲ**— ಇರಲಿ. ಈಗ ಒಳಕ್ಕೆ ನಡೆ. ಕೊಂಚ ವಿಶ್ರಮಿಸಿಕೊಳ್ಳೋಣ.

(ಹೋಗುವರು)

---

# ನಾಲ್ಕನೆಯ ಪ್ರವೇಶ

---

[ಧರ್ಮನ ಆಸ್ಥಾನ:— ಧರ್ಮ, ಭೀಮ, ನಕುಲ ಮತ್ತು ಸಹದೇವ— ಕುಳಿತಿರುವರು.]

**ಧರ್ಮ**—(ದುಗುಡದಿಂದ)— ಭೀಮಾ, ಅರ್ಜುನನಿನ್ನೂ ಬರಲಿಲ್ಲವಲ್ಲ!

**ಭೀಮ**— ಕೃಷ್ಣನಲ್ಲಿಗೆ ಹೋದರೆ ಹೇಗೆ ತಾನೆ ಬೇಗನೆ ಬರುವುದಕ್ಕೆ ಸಾಧ್ಯ?

**ಧರ್ಮ**— ನಿಜ, ನಿಜ, ಸಾಕ್ಷಾತ್ ಭಗವಂತನಲ್ಲವೆ? ಕಂದ ಮೂಲಗಳನ್ನು ಭಕ್ಷಿಸಿಕೊಂಡು ಸಾವಿರಾರು ವರುಷಗಳ ಪರಿಯಂತ

ತಪಸ್ಸು ಮಾಡಿದರೂ ಕೂಡ ಆತನ ಚರಣಕಮಲಗಳ ಸಂದರ್ಶನವೆ ದುರ್ಲಭ! ಹೀಗಿರುತ್ತ ಅಂತಹ ಮಹಾತ್ಮನ ಸನ್ನಿಧಿಯಲ್ಲಿರುವ ಸುಕೃತವು ಸಂಘಟಿಸಿತೆಂದರೆ, ಆರಿಗೆ ತಾನೆ ಹಿಂದೆ ಬರುವುದಕ್ಕೆ ಕಾಲುಬಂದೀತು?

**ಭೀಮ**—ಹಾಲು ಮೊಸರಿಗೇನೂ ಕಡಿಮೆಯಿಲ್ಲ.

**ಧರ್ಮ**—ಎಷ್ಟೆಂದರೂ ಕ್ಷೀರಸಾಗರಶಾಯಿಯಲ್ಲವೆ? ಅಂತಹ ಪರಮಾತ್ಮನು, ತಾನೆ ಗೋಸೇವೆಯನ್ನು ಮಾಡಿ, ನಮ್ಮಂತಹ ಮೂಢಾತ್ಮರಿಗೆಲ್ಲ ಗೋಮಾಹಾತ್ಮ್ಯವನ್ನು ಸೂಚಿಸುತ್ತಾನೆ—ಆದರೆ, ಅರ್ಜುನನು ವಿನೋದಕ್ಕಾಗಿ ಸಾವಕಾಶಮಾಡಿರಲಾರನು. ಪರಮಾತ್ಮನು ಸಹಾಯ ಮಾಡುವುದಕ್ಕೊಪ್ಪಿಕೊಂಡನೊ, ಇಲ್ಲವೆ ಸಂಧಾನವಾಗಬೇಕೆಂದನೊ. ಏನೊ ವಿಶೇಷವಿರಬೇಕು!

**ಭೀಮ**—ಆದರೆ ನಮ್ಮನ್ನೆಂದಿಗೂ ಬಿಟ್ಟುಹಾಕಲಾರನು!

**ಧರ್ಮ**—ಭಕ್ತವತ್ಸಲನೆಂಬ ಬಿರುದನ್ನು ಎಷ್ಟು ಮಾತ್ರಕ್ಕೂ ಕೆಡಿಸಿಕೊಳ್ಳಲೊಲ್ಲನು! ಇನ್ನು ನಮ್ಮ ಪೂರ್ವಪುಣ್ಯವಿದ್ದಂತಾಗುತ್ತಿದೆ!

**ಕಂಚುಕಿ**—(ಪ್ರವೇಶಿಸಿ)—ಜೀಯಾ! ಶ್ರೀ ಪರಮಾತ್ಮನು ಯುವರಾಜನೊಡನೆ ಚಿತ್ತೈಸುತ್ತಿರುವನು!

(ಹೋಗುವನು).

**ಧರ್ಮ**—(ಹರ್ಷದಿಂದ)—ಅಹಾ! ಹಾಗಾದರೆ ನಾವು ಧನ್ಯರಿಸರಿ!

(ಇದಿರ್ಗೊಳ್ಳಲು ಎಲ್ಲರೂ ಎದ್ದು ನಿಲ್ಲುವರು. ಕೃಷ್ಣಾರ್ಜುನರು ಪ್ರವೇಶಿಸುವರು.)

**ಧರ್ಮ**—ಕೃಷ್ಣಾ, ಧರ್ಮನು ವಂದಿಸುವನು. (ಎಲ್ಲರೂ ನಮಸ್ಕರಿಸುವರು. ಕೂಡಲೆ ಕೃಷ್ಣನು ಧರ್ಮನನ್ನು ವಂದಿಸುವನು. ಧರ್ಮನು ಆತನನ್ನು ತಡೆಯುವನು)—ಏನು ನಿರಹಂಕೃತಿಯೊ? ಈ ದಾಸನು ಅಂತಹ ಭಾರವನ್ನು ವಹಿಸಿಕೊಳ್ಳಲು ಸಮರ್ಥನಲ್ಲ! ಇದೊ ಈ ಪೀಠವನ್ನು ಅಲಂಕರಿಸೋಣಾಗಲಿ. (ಎಲ್ಲರೂ ಕುಳಿತುಕೊಳ್ಳುವರು) ಕೃಷ್ಣ, ಅನಾಥರ ಕೋರಿಕೆಯನ್ನು ಸಲಿಸುವುದರಲ್ಲಿ ನಿನಗೆಷ್ಟರ ಮಟ್ಟಿನ ಅವಸರವೊ? ನಂಬಿದವರಿಗೆ

ಇಂಬು ಕೊಡುವನೆಂಬ ಬಿರುದು ಸಾರ್ಥಕವಾಯಿತು. ಪರಮಾತ್ಮಾ! ನಿನ್ನ ಕೃಪಾಕಟಾಕ್ಷವೊಂದಿಲ್ಲದಿರುತ್ತಿದ್ದರೆ, ನಮ್ಮ ಅವಸ್ಥೆ ಏನಾಗುತಿತ್ತು?

**ಕೃಷ್ಣ**—ಧರ್ಮ, ಸಾಕು. ಅದೆಲ್ಲವೂ ಮೊದಲಿಗಾಯಿತು. ಈಗ ಅರ್ಜುನನ ಸಾರಥಿಯಾದ ಮೇಲೆ ಪರಮಾತ್ಮನದೇನು ಉಳಿಯಿತು? ಧರ್ಮರೆಂದರೆ ನೀವೆ ಸರಿ!

**ಧರ್ಮ**—ನಿನ್ನನುಗ್ರಹವೊಂದಿದ್ದರೆ ನಮ್ಮ ಭಾಗ್ಯಕ್ಕೇನು ತಾನೆ ಕೊರತೆ ಬಂದೀತು?

**ಕೃಷ್ಣ**—ಧರ್ಮ. ಬಾಯುಪಚಾರವೆಲ್ಲವೂ ಸಾಕು. ಈಗ ನಿಮ್ಮೆಲ್ಲರ ಅಭಿಪ್ರಾಯವೇನು? ಯುದ್ಧಮಾಡಿಯೆ ತೀರಬೇಕೆಂದೆಣಿಸಿರುವಿರಾ?

**ಧರ್ಮ**—ಕೃಷ್ಣಾ, ನನ್ನನ್ನೇಕೆ ಕೇಳುವೆ? ಭೀಮಾರ್ಜುನರೊಡನೆ ಕೇಳಬಾರದೆ?

**ಭೀಮ**—ಏತಕ್ಕಾಗಿ ಯುದ್ಧಮಾಡಕೂಡದು?

**ಅರ್ಜುನ**—ನಾನೇಕೆ ಮತ್ತೆ ನಿನ್ನನ್ನಿಲ್ಲಿ ತನಕ ಕರೆದುಕೊಂಡು ಬಂದಿರುವುದು?

**ಕೃಷ್ಣ**—ಆದರೆ ಪೂರ್ವಾಪರ ವಿಚಾರವಿಲ್ಲದೆ ದುಡುಕಬಾರದು.

**ಭೀಮ**—ಏಕೆ? ಪೂರ್ವದ ವಿಚಾರವೆಲ್ಲವೂ ನಮ್ಮನುಭವಕ್ಕೆ ಬಂದಿದೆ. ಅಪರವೆಲ್ಲವೂ ಕೌರವನಿಗಿರಲಿ!

**ಕೃಷ್ಣ**—ಏನು? ಯುದ್ಧಮಾಡುವವರಾರು?

**ಭೀಮ**—ನಾವೆಲ್ಲರೂ ಇಲ್ಲವೆ?

**ಕೃಷ್ಣ**— ಚೆನ್ನಾಯಿತು! ನಿನ್ನ ಮಾತಿಗೆ ಮರುಳಾಗುವವನು ಮೂಢನೆ ಸರಿ! ಎಲ್ಲಿಯಾದರೂ ತಿನ್ನುವುದಕ್ಕಿದೆಯೆ ನೋಡು!

**ಭೀಮ**—ನಿನ್ನ ಹಾಗೆ ನಾವೇನೂ ಹೆಣ್ಣಿಗರಲ್ಲ, ಬಲ್ಲೆಯಾ? ಮಾಗಧನಲ್ಲಿ ಕೈಲಾಗದಿದ್ದ ಹೇಡಿಗಳೆಂದೆಣಿಸಬೇಡ!

**ಕೃಷ್ಣ**—ನಿಜ, ನಿಜ, ಬಕಾಸುರನ ಬಾಯಿಗೆ ಬೆರಳಿಡಿಸಿದವನನ್ನು ಕಾಣೆನೆ?

**ಭೀಮ**—ಸ್ತ್ರೀಯರ ಸಮೂಹದಲ್ಲಿಯೆ ಬೆಳೆದ ನಿನಗೆ ಪೌರುಷವು ಹೇಗೆ ತಾನೆ ತಿಳಿದೀತು? ನಮ್ಮಿಂದೇನಾಗುವುದೆಂಬುದನ್ನು ನೀನೆ ನೋಡುವೆ ಯಂತೆ. ಅವುದಕ್ಕೂ ಯುದ್ಧ ಪ್ರಾರಂಭವಾಗಲಿ!

**ಧರ್ಮ**—ಭೀಮಾ, ವೃಥಾಲಾಪದಿಂದೇಕೆ ಕಾಲಹರಣ ಮಾಡ ಬೇಕು? ಪ್ರಕೃತ ಕಾರ್ಯವನ್ನು ಯೋಚಿಸಿದರಾಗದೆ?

**ಕೃಷ್ಣ**—ಅಹುದಹುದು. ಪ್ರಥಮತಃ ಸಂಗ್ರಾಮವೊ ಸಂಧಾನವೊ ಎಂಬುದು ನಿಶ್ಚಯವಾಗಬೇಕು.

**ಭೀಮಾರ್ಜುನರು**—ಸಂಧಿಯ ಮಾತು ತೀರಿತು, ಯುದ್ಧವೆ ಸರಿ!

**ಕೃಷ್ಣ**—ಏನೆನ್ನುವೆ, ಧರ್ಮಾ?

**ಧರ್ಮ**—ಏನೆನ್ನಲಿ? ನನ್ನಿಂದಾಗಿ ಅವರೆಷ್ಟೊ ಕಷ್ಟಪಟ್ಟರು. ಅವರಿಷ್ಟವಿದ್ದಂತೆಯೆ ಆಗಲಿ. ಆದರೆ ಸಂಧಾನವೆ ಒಳ್ಳೆಯದೆಂದು ಕಾಣು ತ್ತಿದೆ.

**ಕೃಷ್ಣ**—ಪಾಂಚಾಲಿಯೆಲ್ಲಿ? ಆಕೆಯನ್ನು ಕೇಳಬೇಕು!

**ಭೀಮ**—ಇದೊ, ಇಲ್ಲಿಯೆ ಬರುತ್ತಿರುವಳು!

**ಪಾಂಚಾಲಿ**—(ಪ್ರವೇಶಿಸಿ)—ಕೃಷ್ಣಾ, ಉದ್ಧರಿಸು! (ನಮಸ್ಕರಿಸು ವಳು.)

**ಕೃಷ್ಣ**—ಹೇಗಿದ್ದಿಯಮ್ಮಾ, ಚೆನ್ನಾಗಿರುವೆಯಲ್ಲ?

**ಪಾ**—ನಿನ್ನ ಚಿತ್ತಕ್ಕೆ ತಿಳಿಯದೆ?

**ಕೃಷ್ಣ**—ಕೌರವನಲ್ಲಿ ಸಂಧಿಮಾಡಬೇಕೆಂದು ಯೋಚಿಸುತಿದ್ದೇವೆ. ನಿನ್ನ ಮತವೇನು, ಹೇಳು ನೋಡೋಣ?

**ಸಂಜಯ**—(ಪ್ರವೇಶಿಸಿ)—ರಾಜನೆ ಜಯಶೀಲನಾಗು, ಕೃಷ್ಣಾ! ಸಂಜಯನು ವಂದಿಸುವನು.

**ಧರ್ಮ**—ಏನಯ್ಯಾ ಸಂಜಯಾ, ಹಸ್ತಿನಾವತಿಯ ವರ್ತಮಾನ ವೇನು? ಭೀಷ್ಮಾಚಾರ್ಯರು ಮುಂತಾದವರೆಲ್ಲರೂ ಸುಖವಾಗಿರುವರೆ?

**ಸಂಜ**—ಶ್ರೀ ಕೃಷ್ಣನ ಅನುಗ್ರಹದಿಂದ ಇಷ್ಟರ ತನಕ ಸುಕ್ಷೇಮಿ ಗಳ!

**ಕೃಷ್ಣ**—ಏನಯ್ಯಾ, ಕಪಟ ದ್ಯೂತದ ನೆವದಿಂದ ನೆಲವನ್ನು ಸುಲು ಕೊಂಡು, ಪಾಂಡವರನ್ನು ಅಡವಿಗಟ್ಟಿದ ಕೌರವನಿಗೆ ಕುಶಲವೆ?

**ಭೀಮ**—ನಿಮ್ಮೊಡೆಯನ ತೊಡೆಗಳು ಬಲವಾಗಿವೆಯಲ್ಲವೆ? ಖೂಳ ದುಶ್ಶಾಸನಾದಿಗಳ ದೇಹದಾರ್ಢ್ಯಕ್ಕೇನೂ ಕೊರತೆ ಬಂದಿಲ್ಲವಲ್ಲ?

**ಅರ್ಜುನ**—ಅಯ್ಯಾ, ವೀರಾಧಿವೀರರಾದ ಕರ್ಣಾದಿಗಳು ಮೊನ್ನಿನ ಗೋಗ್ರಹಣದಿಂದ ತುಂಬ ಬಳಲಿ ಹೋದರು! ಈಗಲಾದರೂ ಆ ಶ್ರಮ ವೆಲ್ಲವೂ ಪರಿಹಾರವಾಗಿರಬಹುದಲ್ಲವೆ?

**ಪಾ**—ಚಿತ್ರಸೇನನಿಂದ ಕಟ್ಟಿಸಿಕೊಂಡ ಭಾವಯ್ಯನವರು ಚೆನ್ನಾಗಿರು ವರಲ್ಲವೆ?

**ಸಂಜಯ**—ನನ್ನನ್ನೇತಕ್ಕಾಗಿ ಈ ಪರಿ ಹೀಯಾಳಿಸುವಿರಿ? ನಾನು ಬಂದ ಕಾರ್ಯವನ್ನು ಕೇಳಬಾರದೆ? ಯುದ್ಧ ವಿನಾ ರಾಜ್ಯವು ನಿಮಗೆ ದೊರೆಯಲಾರದು! ಆದುದರಿಂದ, ಯುದ್ಧಕ್ಕೆ ಸನ್ನದ್ಧರಾಗಿರಬೇಕೆಂದು ಹೇಳುವುದಕ್ಕೆ ಬಂದೆ.

**ಧರ್ಮ**—ಕೌರವನು ಸಂಧಿಗೊಲ್ಲನೆ?

**ಸಂಜ**—ಸಂಧಿಯೇತಕ್ಕೆ? ನೀವಂತೂ ರಾಜ್ಯ ಸೋತವರು! ಇನ್ನು ನಿಮಗೆ ಅಧಿಕಾರವೆಲ್ಲಿಂದ? ಕ್ಷಾತ್ರಧರ್ಮಕ್ಕನುಸಾರವಾಗಿ ಯುದ್ಧದಿಂದಲೆ ನೀವು ರಾಜ್ಯವನ್ನು ಪಡೆದುಕೊಳ್ಳಬೇಕು. ನಮ್ಮ ಅರಸನು ಎಂದೂ ಧರ್ಮತಪ್ಪುವನಲ್ಲ!

**ಕೃಷ್ಣ**—ವನವಾಸಿಗಳಿಗೆ ಪೃಥ್ವೀಪತಿಗಳೊಡನೆ ಕಾದಾಡುವ ಸತ್ವವು ಹೇಗೆ ತಾನೆ ಉಂಟಾದೀತು? ಕಾದಾಟಕ್ಕಿಂತಲೂ ವನವಾಸವೆ ಮೇಲು! ನಿಮ್ಮ ಕೌರವನ ಧರ್ಮಗರ್ಮವೆಲ್ಲ ಹಾಗಿರಲಿ? ಸತ್ಯವಿದ್ದರೆ ಪೃಥ್ವಿ ದೊರಕೀತು!

**ಭೀಮ**—ಆ ಖೂಳರನ್ನೆಲ್ಲ ಕ್ಷೈಮಿನಿಗೆ ಕಳುಹಿಸಿ ಬಿಡುತ್ತೇನೆ! ಅವರನ್ನೊಂದು ಸಲ ರಣರಂಗಕ್ಕಿಳಿಸು!

**ಅರ್ಜುನ**—ದ್ಯೂತದ ಸಮಯದಲ್ಲಿ ಆಡಿದ ಭಾಷೆಯನ್ನು ನಾವಿನ್ನೂ ಮರೆಯಲಿಲ್ಲವೆಂದು ಕೌರವನಿಗೆ ತಿಳಿಸು!

**ಪಾ**—ಅಂದು ಬಿಚ್ಚಿದ ಮುಡಿ ಇನ್ನೂ ಹಾಕಿಕೊಳ್ಳಲಿಲ್ಲ. ಇನ್ನಾದರೂ ಹಾಕಿಸುವಂತೆ ಭಾವಯ್ಯನಿಗೆ ನನ್ನ ಅರಿಕೆಯನ್ನು ಹೇಳಿಬಿಡು!

**ಧರ್ಮ**—ಈತನ ಮೇಲೇಕೆ ಉರಿದು ಬೀಳುತ್ತೀರಿ? ಸ್ವಾಮಿಯನ್ನು ಬಿಟ್ಟು ಸೇವಕನನ್ನು ಜರೆಯುವುದು ಏತರ ನ್ಯಾಯ?—ಅಯ್ಯಾ ಸಂಜಯಾ! ಆವುದಕ್ಕೂ ನಾಳೆ ಕೃಷ್ಣನು ಬರುತ್ತಾನೆಂದು ಹೇಳು.

**ಸಂಜಯ**—ಹಾಗಾದರೆ ನನಗನುಜ್ಞೆಯಾಗಲಿ.

**ಧರ್ಮ**—ಒಳ್ಳೆಯದು.

(ಸಂಜಯನು ನಮಸ್ಕರಿಸಿ ಹೋಗುವನು.)

**ಕೃಷ್ಣ**—ಧರ್ಮ, ಏನು ಯೋಚಿಸುತ್ತಿರುವೆ?

**ಧರ್ಮ**—ನಿನಗೆ ತಿಳಿಯದೆ?

**ಕೃಷ್ಣ**—ನಾಳೆ ನಾನು ಹಸ್ತಿನಾವತಿಗೆ ಹೋಗಬೇಕೆ?

**ಧರ್ಮ**—ದಾಸನ ಮೇಲೆ ಅಷ್ಟೊಂದು ಅನುಗ್ರಹ ಮಾಡಿದರಾಗಬಹುದು.

**ಕೃಷ್ಣ**—ಆಗಲಿ. ಅಲ್ಲಿಗೆ ಹೋಗಿ ಮಾಡತಕ್ಕದ್ದೇನಿರುವುದು?

**ಧರ್ಮ**—ನ್ಯಾಯವಾಗಿ ಅರ್ಧ ರಾಜ್ಯವು ನಮಗೆ ಸಿಕ್ಕತಕ್ಕದು. ಆದರೆ, ಕೌರವನು ಕೊಡಲೊಲ್ಲನು. ಆದರೂ ಚಿಂತಿಲ್ಲ. ಅರ್ಧ ರಾಜ್ಯ

ಬೇಡ—ನಮಗೆ ಐವರಿಗೆ ಐದು ಗ್ರಾಮಗಳನ್ನಾದರೂ ಕೊಡಿಸಲಾರೆಯಾ? ನಾವು ಅದರಲ್ಲಿಯೇ ಸಂತುಷ್ಟರಾಗುತ್ತೇವೆ!

**ಕೃಷ್ಣ**—ಧರ್ಮ, ಏನು ಮಾತು? ಐದು ಗ್ರಾಮವೆ? ಆವ ನೀತಿ? ಕೌರವನಲ್ಲಿ ಸಂಧಾನವೆಂದರೇನು? ಆತನು ನಿಮ್ಮನ್ನು ನಿರ್ಮೂಲ ಮಾಡುವುದಕ್ಕೆ ಎಣಿಸಿದುದೆಲ್ಲವನ್ನೂ ಮರೆತು ಬಿಟ್ಟೆಯಾ?

**ಧರ್ಮ**—ಹಾಗಲ್ಲ. ಕೃಷ್ಣಾ—ಅವರೆಷ್ಟಂದರೂ ಕೇವಲ ಆಪ್ತ ಬಂಧುಗಳಲ್ಲವೆ? ಚಿಕ್ಕಂದಿನಿಂದಲೂ ಒಟ್ಟಿಗೆ ಬೆಳೆದವರು. ಅಂತಹರೊಡನೆ ಹೇಗೆ ತಾನೆ ಯುದ್ಧ ಮಾಡಲಿ? ಅದರಲ್ಲಿಯೂ ಅಪಕೀರ್ತಿ ಬೇರೆ. ಇದಕ್ಕಿಂತಲೂ ಅಲ್ಪವಾದುದರಲ್ಲಿಯೆ ಸಂತುಷ್ಟರಾಗುವುದು ಮೇಲಲ್ಲವೆ?

**ಕೃಷ್ಣ**—ಕೌರವನು ಕೇವಲ ದ್ರೋಹಿ! ಹೇಗೆ ಆತನೊಡನೆ ಬೆರತುಕೊಂಡಿರುವಿರಿ?

**ಧರ್ಮ**—ಅವರವರ ಕರ್ಮಕ್ಕೆ ತಕ್ಕ ಫಲವು ಅವರವರಿಗೆನೆ ದೊರಕುವುದು! ಅವರನ್ನು ಕೊಂದು ನಾವೇಕೆ ಬಂಧುಹತ್ಯಾಪಾತಕಕ್ಕೊಳಗಾಗಬೇಕು?

**ಕೃಷ್ಣ**—ಆಗಲಿ. ಆತನು ಒಂದು ವೇಳೆ ಐದು ಗ್ರಾಮಗಳನ್ನು ಕೊಡುವುದಕ್ಕೊಪ್ಪಿಕೊಂಡರೆ, ಆ ಐದು ಗ್ರಾಮಗಳಿಂದ ನಿಮಗೆ ಸಿಕ್ಕುವ ಮಹತ್ವವೇನು? ಐದನೆಯ ಒಂದಂಶವಾದರೂ ಕೊಡುವುದಕ್ಕೆ ಕೇಳಲೆ?

**ಧರ್ಮ**—ಹೇಗೆ ಬೇಕಾದರೂ ಮಾಡು. ಕೊನೆಗೆ ಐದು ಗ್ರಾಮಗಳು ಸಿಕ್ಕಿದರೂ ಸರಿಯೆ.

**ಕೃಷ್ಣ**—ಇರಲಿ. ಭೀಮಾದಿಗಳು ಏನನ್ನುವರೊ!

**ಧರ್ಮ**—ನನ್ನ ಅಭಿಪ್ರಾಯವು ಹೀಗಿದೆ. ಇನ್ನು ಅವರೆಂದಂತೆ ಮಾಡು.

**ಪಾ**—(ಸ್ವಗತ) ಸರಿ. ಈಗ ಏನನ್ನುವರೊ, ನೋಡೋಣ!

**ಕೃಷ್ಣ**—ಭೀಮಾ, ಏನು ಹೇಳುವೆ?

**ಭೀಮ**—ಅಣ್ಣಯ್ಯನಿಗೆ ಇಷ್ಟವಾದರೆ—ನಿನಗೆ ಸಮ್ಮತವಾದರೆ—ಕೌರವನು ರಾಜ್ಯ ಕೊಟ್ಟರೆ—ಮತ್ತೇನು ಬೇಕು? ಹಾಗೆಯೆ ಆಗಲಿ.

**ಪಾ**—(ಸ್ವಗತ) ಸರಿ, ಒಬ್ಬನಾಯಿತು!

**ಕೃಷ್ಣ**—ಅರ್ಜುನನ ಅಭಿಪ್ರಾಯವೇನು?

**ಅರ್ಜುನ**—ನನ್ನನ್ನೇನು ಕೇಳುವುದು? ಅವರಿಬ್ಬರಿಗೆ ಹೇಗೆಯೊ, ಹಾಗೆಯೆ ಸರಿ!

**ಪಾ**—(ಸ್ವಗತ)—ಇಬ್ಬರಾದರು!

**ಕೃಷ್ಣ**—(ನಕುಲಸಹದೇವರನ್ನು)—ನೀವೇನು ಹೇಳುವಿರಿ?

**ಸಹದೇವ**—ಅವರು ಮೂವರನ್ನು ನಾವು ಮಿಗುವರಲ್ಲ. ಆದರೆ, ಕೌರವನು ಸಂಧಿಗೊಪ್ಪುವನೆಂದು ನಾವೆಣಿಸುವುದಿಲ್ಲ.

**ಪಾ**—(ಸ್ವಗತ)—ಇಂದಿನ ದಿನದಲ್ಲಿ ಇವರೆಲ್ಲರೂ ಬಳೆದೊಟ್ಟವರಾದರು!—ಇಲ್ಲ, ಅದಕ್ಕಿಂತಲೂ ಕಡೆಯೆ ಸರಿ!

**ಕೃಷ್ಣ**—ನಿಮ್ಮ ಅಭಿಪ್ರಾಯಗಳೆಲ್ಲ ಹಾಗಿರಲಿ. ಪಾಂಚಾಲೀ, ನಿನ್ನಿಷ್ಟವಾವುದು, ಹೇಳು ನೋಡೋಣ?

**ಪಾ**—(ರೋಷಾವೇಶದಿಂದ)—ನನ್ನ ಇಷ್ಟವೇನು? ಇವರೆಲ್ಲರೂ ಕ್ಷತ್ರಿಯ ಪತಿಗಳೆನ್ನಿಸುವುದಕ್ಕಿಂತಲೂ ಪತ್ನಿಯರಾಗಿದ್ದರೆ ಲೇಸಾಗಿತ್ತು!

**ಕೃಷ್ಣ**—ಹಾಗಲ್ಲ, ದುಡುಕಬೇಡ. ಸಾಹಸ ಕಡಿಮೆಯಾಗಿ ಸಾಮದ ಯೋಚನೆಯಲ್ಲ! ಕೌರವನು ದುಷ್ಕರ್ಮಿಯೆ ಅಹುದು. ನಿಮ್ಮನ್ನು ಬಹಳವಾಗಿ ಪೀಡಿಸಿದವನು, ಅದೆಲ್ಲವೂ ನಿಜ. ಆದರೆ, ಅವರು ಮಾಡಿದುದನ್ನು ಅವರವರೆ ಅನುಭವಿಸಲಿ!

**ಪಾ**—ಆದರೆ, ಕೃಷ್ಣಾ—ಅವರ ದುಷ್ಕರ್ಮದ ಫಲವನ್ನು ಅನುಭವಿಸುವುದಕ್ಕೆ ಮಾತ್ರ ನಾವಾದೆವಲ್ಲವೆ? ವಾಯುಪುತ್ರನಲ್ಲಿಯಾದರೂ ಶೌರ್ಯವಿರುವುದೆಂದೆಣಿಸಿದ್ದೆ. ಆಡಿದ ಮಾತಿಗೆ ತಪ್ಪುವನಲ್ಲವೆಂಬ ಭರವಸೆಯಿತ್ತು. ಇಷ್ಟಾಗಿ ಕೌರವನಲ್ಲಿ ಆತನಿಗೆ ಬದ್ಧದ್ವೇಷ. ಆದರೂ

ಈಗ ಮಾತ್ರ ಹೇಡಿಯಂತೆ ಸಂಧಿಗೊಡಂಬಟ್ಟುದು ಕೇವಲ ಆಶ್ಚರ್ಯವೆ ಸರಿ!—(ಪಾಂಡವರೊಡನೆ)—ಬಹುಶಃ ಈಗ ನೀವೆಲ್ಲರೂ ಯತಿತ್ವವನ್ನು ಕೈಕೊಂಡಿರಲ್ಲವೆ? ರುದ್ರಾಕ್ಷಿಮಾಲೆ ಇಲ್ಲವಲ್ಲ! ವೀರಾಧಿವೀರರೆನಿಸಿಕೊಂಡು ಈಗ ಮಾತ್ರ ಭೀರುಗಳಾದಿರಲ್ಲವೆ?—(ಭೀಮನೊಡನೆ)— ಸಟ್ಟುಗವನ್ನೇಕೆ ಬಿಸಾಡಿದುದು? ಈ ಗದೆಗಿಂತಲೂ ಅದುವೆ ಚೆನ್ನಾಗಿ ಒಪ್ಪುತ್ತಿತ್ತು!

**ಕೃಷ್ಣ**—ಪಾಂಚಾಲೀ, ಕೊಂಚ ಸೈರಿಸಿಕೊ. ಪತಿದೂಷಣವು ಅನುಚಿತವಲ್ಲವೆ? ಆವ ಕಾರಣದಿಂದ ಸಾಮಕ್ಕೊಪ್ಪಿಕೊಂಡರೆಂಬುದನ್ನು ಕೊಂಚ ಯೋಚಿಸಿ ನೋಡು!

**ಪಾ**—ಕೃಷ್ಣಾ, ಕಾರಣಗೀರಣ ಒಂದೂ ನಾನೊಲ್ಲೆ! ಕ್ಷತ್ರಿಯರಾಗಿ ಹುಟ್ಟಿ ಭಾಷೆ ತಪ್ಪುವವರು ಇನ್ನೆಷ್ಟರ ಮಟ್ಟಿನ ನೀತಿವಂತರು? ಇವರ ವೇಷಕ್ಕೆ ಪಲ್ಲಟ ಬಂದಂತೆ ಶೌರ್ಯಕ್ಕೂ ಬಂದುಬಿಟ್ಟಿತೆ?—ಹಾ, ಹಾ! ನನ್ನಂತಹ ಪಾಪಿನಿಯು ಮೂರು ಲೋಕದೊಳಗೂ ಇರಲಾರಳು! ಒಬ್ಬಳು ಸ್ತ್ರೀಗೆ ಒಬ್ಬನೆ ಗಂಡನು. ಆದರೂ ಆತನು ಆಕೆಯನ್ನು ತುಂಬ ಪ್ರೀತಿಯಿಂದಲೂ ಜಾಗರೂಕತೆಯಿಂದಲೂ ನೋಡಿಕೊಳ್ಳುತ್ತಾನೆ! ಆದರೆ ಈ ಮಂದಭಾಗ್ಯೆಗೆ ಐವರು ಪತಿಗಳಿದ್ದರೂ ನಿಷ್ಫಲವೆ ಆಗಿಹೋಯಿತು! ಅಂದು—ಆ ಖೂಳ ದುಶ್ಶಾಸನನು ಮುಂದಲೆ ಹಿಡಿದೆಳೆದು ಸಭೆಗೆ ತಂದಾಗ ಪ್ರತಿಮೆಗಳಂತೆ ನಿಂತುಕೊಂಡು ವಿನೋದವನ್ನು ನೋಡುತ್ತಿದ್ದರಲ್ಲವೆ? ಆಹಾ!—(ಪಾಂಡವರಿಗೆ)—ಆ ನೀಚರಿಗೆ ನೀವು ಬೆದರಿ ಸಂಧಿಯನ್ನೆ ಮಾಡುವಿರಾದರೆ—ನಿಜವಾಗಿಯೂ ನಾನೀ ಪ್ರಾಣಗಳನ್ನಿಟ್ಟುಕೊಂಡಿರಲಾರೆ! ಸತ್ಯ ಬಿಟ್ಟು ಹೋಗಬಾರದೆಂದು ಕಾಡುಗುಡ್ಡಗಳೆಲ್ಲವನ್ನೂ ಸುತ್ತಿದ್ದೆನು! ದಾಸೀವೃತ್ತಿಯನ್ನು ಸ್ವೀಕರಿಸಿದೆನು. ಮಾನವನ್ನು ಕೂಡ ಕಳೆದುಕೊಳ್ಳುವ ಸಂಭವ ಬಂತು! ನಮ್ಮ ಈ ಕಷ್ಟಗಳಿಗೆಲ್ಲ ಕಾರಣಭೂತರಾದ ಆ ದುರಾತ್ಮರಲ್ಲಿ ಈಗ ಸಂಧಿಯಂತೆ! ಇದೆಲ್ಲವೂ ನಿಮಗೆನೆ ಚಂದ!—(ರೋದಿಸುವಳು).

**ಭೀಮ**—(ಸ್ವಗತ)—ಆಹಾ! ಈಕೆಯು ಅಳುವುದಕ್ಕಾರಂಭಿಸಿಬಿಟ್ಟಳು! ಇದನ್ನು ನಾನು ನೋಡಲಾರೆ. ಹೇಗಾದರೂ ಸಮಾಧಾನಪಡಿಸಬೇಕು. (ಪ್ರಕಾಶ)—ಪಾಂಚಾಲೀ ಸೈರಿಸು. ನನ್ನೆದುರಿಗೆ ರೋದಿಸಕೂಡದು. ನಾನೇನು ಮಾಡಬೇಕೊ ಹೇಳು!

**ಪಾ**—ಆಹಾ! ನಿನ್ನನ್ನು ನಾನರಿಯೆನೆ? ನನ್ನ ಆಪತ್ಕಾಲಕ್ಕೊದಗುವನು ನೀನೆ ಸರಿ! ಯಮಪುತ್ರನಂತೂ ಸರ್ವದಾ ಶಾಸ್ತ್ರೋಕ್ತ ಧರ್ಮಗಳಲ್ಲಿಯೆ ಸರಿ. ಉಳಿದವರು ಅಗ್ರಜನ ಮಾತನ್ನು ಮಿಾರುವರಲ್ಲ. ಅಲ್ಲದೆ ಹೋದರೆ, ಮೊನ್ನೆ ಕೀಚಕನನ್ನು ಕೊಂದುಕೊಡುತ್ತಿರಲಿಲ್ಲವೆ? ಇನ್ನು ನಮಗಿಷ್ಟೆಲ್ಲ ಕಷ್ಟಕೊಟ್ಟ ಆ ದುಷ್ಟರನ್ನು ಹೇಗೆ ತಾನೆ ನಿರ್ಮೂಲ ಮಾಡದೆ ಇರಬಹುದು?

**ಭೀಮ**—ಅದೆಲ್ಲವೂ ಸರಿಯೆ. ಆದರೆ, ತಾಯಿಯ ಗರ್ಭದಿಂದ ಇಳಿದ ಮೊದಲುಗೊಂಡು ನಾನೊಂದು ದಿನವಾದರೂ ಸುಖವನ್ನನುಭವಿಸಲಿಲ್ಲ! ಅದರ ಮೇಲೆ ವನಸಂಚಾರ ಬೇರೆ. ಮೊನ್ನೆ ಕೀಚಕನನ್ನು ಕೊಂದ ಮೇಲೆಯಂತೂ ನನ್ನ ಶಕ್ತಿಯು ತೀರ ಕುಂದಿಹೋದಂತಿದೆ! ಆದುದರಿಂದ, ಕೌರವರಲ್ಲಿ ಹೇಗೆ ತಾನೆ ಯುದ್ಧವು ಸಾಧ್ಯ?

**ಪಾ**—ಚೆನ್ನಾಯಿತು, ಚೆನ್ನಾಯಿತು! ಶೂರನೆ ಸರಿ! ಕೌರವನ ರಕ್ತದಲ್ಲಿ ನನ್ನ ಜಡೆಯನ್ನು ಮುಳುಗಿಸಿ ಕರುಳುಗಳನ್ನು ಮುಡಿಸುವ ಆ ಪ್ರತಿಜ್ಞೆಯು ಈಗೆಲ್ಲಿ ಅಡಗಿಕೊಂಡಿತು? ಸೀರೆಯನ್ನುಟ್ಟುಕೊಂಡು ಬಳೆ ತೊಟ್ಟುಕೊಳ್ಳಬಾರದೆ? ಧನುರ್ಬಾಣಗಳನ್ನೀಚೆಗೆ ಕೊಡಿಸೋಣಾಗಲಿ! ನಾನೆ ಪುರುಷವೇಷವನ್ನು ಧರಿಸಿಕೊಂಡು ಶತ್ರುಗಳನ್ನು ನಿರ್ನಾಮಮಾಡಿಬಿಡುತ್ತೇನೆ!

**ಕೃಷ್ಣ**—ಏನು ಮಾತು? ಪುರುಷವೇಷವಂತೆ, ಶತ್ರುಗಳ ನಿರ್ನಾಮವಂತೆ!

**ಪಾ**—ಪುರುಷರಾದವರೆ ಸ್ತ್ರೀಯರಂತಿದ್ದರೆ, ಮತ್ತಾರು ತಾನೆ ಯುದ್ಧಮಾಡತಕ್ಕವರು?—ನಿಮ್ಮ ಹಂಗು ಬೇಡಲೆ ಬೇಡ! ಐವರು ಮಕ್ಕಳೂ ಘಟೋತ್ಕಚನೂ ನನ್ನ ಮಾತು ಮಿಾರುವರಲ್ಲ. ನಮ್ಮ ತಂದೆಗೆ ಮೂರು ಅಕ್ಷೋಹಿಣೀ ಬಲವಿರುವುದು. ಇವರಿಂದ ಕುರುಕುಲವನ್ನು ಸುಟ್ಟುಬಿಡುತ್ತೇನೆ. ನನಗನುಜ್ಞೆಯಾಗಲಿ!

**ಭೀಮ**—ಪಾಂಚಾಲಿ, ಸಾಕು! ನೀನು ನಿಶ್ಚಿಂತಳಾಗಿರು. ಕುರುಕುಲವೆಲ್ಲವೂ ರಣರಂಗದಲ್ಲಿ ಹೊರಳಾಡುವುದನ್ನು ಶೀಘ್ರದಲ್ಲಿಯೆ ಕಣ್ಣಾರೆ

ನೋಡುವೆ! ಕೃಷ್ಣಾ, ಇನ್ನು ಸಂಧಿಯ ಮಾತು ಬಿಟ್ಟುಬಿಡು! ಒಂದು ವೇಳೆ ಅಣ್ಣಯ್ಯನಿಗೆ ಯುದ್ಧಮಾಡುವುದಕ್ಕೆ ಮನಸ್ಸಿಲ್ಲವಾದರೆ, ಆತನು ಸಂಧಿಯನ್ನೆ ಮಾಡಿಕೊಂಡು ಗ್ರಾಮಗಳನ್ನು ಪಡೆದುಕೊಳ್ಳಲಿ. ಆದರೆ, ನಾನು ಮಾತ್ರ ಯುದ್ಧ ಮಾಡಿಯೆ ತೀರಬೇಕು!

**ಕೃಷ್ಣ**—ಧರ್ಮಾ, ಇವರಿಬ್ಬರ ಮತವೆ ಬೇರೆಯಾಯಿತು. ಈಗ ಏನು ಹೇಳುವೆ, ಸಂಧಿಯೊ ಸಂಗ್ರಾಮವೊ?

**ಧರ್ಮ**—ಕೃಷ್ಣಾ, ಪೂರ್ವಜನ್ಮದಲ್ಲಿ ನಾವೇನೋ ಘೋರ ಪಾತಕವನ್ನು ಮಾಡಿರಬೇಕು. ಊರನ್ನು ಬಿಟ್ಟು ಕಾಡು ಸುತ್ತಿದೆವು. ಆದರೂ, ನೀನು ಮಾತ್ರ ನಮ್ಮನ್ನು ಬಿಟ್ಟುಹಾಕಲಿಲ್ಲ. ಎಷ್ಟಾದರೂ ನಾವು ಅನಾಥರೆ ಸರಿ! ಅರಸರಲ್ಲೇಕೆ ನಮಗೆ ಕಲಹ? ಜಯಾಪಜಯ ಗಳನ್ನಾರು ಬಲ್ಲರು? ಅದೂ ಅಲ್ಲದೆ, ಬಂಧುಹತ್ಯಾದೋಷ ಬೇರೆ. ಇದೆಲ್ಲ ವನ್ನು ವಿಚಾರಿಸಿ ನೋಡಿದರೆ—ಕೃಷ್ಣಾ, ನಮಗೆ ದೊರೆತನವೆ ಬೇಡ, ಬಡತನವೆ ಸಾಕು! ಕೌರವನು ಸುಖಿಯಾಗಿದ್ದಾನೆಂದು ಮಾತ್ರ ಕೇಳಿದರೆ ಸರಿ! ಆದುದರಿಂದ ಸಂಧಿಯೆ ಲೇಸಾಗಿ ಕಾಣುತ್ತಿದೆ. ಇನ್ನು ಅರ್ಜು ನಾದಿಗಳನ್ನು ಕೇಳಿಕೊ!

**ಅರ್ಜುನ**—ಸಂಗ್ರಾಮವೆ ಸಿದ್ಧ! ಕೌರವನ ಕೌಟಿಲ್ಯವನ್ನೆಂದೂ ಮರೆಯಲೊಲ್ಲೆವು!

**ಧರ್ಮ**—ಹಾಗಾದರೆ—ಕೌರವನು ಸಂಧಿಗೆ ಒಪ್ಪದೆ ಹೋದರೆ—ಸಂಗ್ರಾಮವನ್ನು ನಿಶ್ಚೈಸಿಕೊಂಡು ಬಾ!

**ಪಾಂಚಾಲಿ**—ಕೃಷ್ಣಾ! ಹೇಗಾದರೂ ಸಂಗ್ರಾಮವನ್ನೆ ನಮ ಕಟ್ಟು! (ನಮಸ್ಕರಿಸುವಳು).

**ಕೃಷ್ಣ**—ಅಮ್ಮಾ, ಭಯಪಡಬೇಡ. ಕುರುಕುಲವೆಲ್ಲವನ್ನೂ ನಿರ್ಮೂಲವಮಾಡಿಸಿಕೊಡುವ ಕಾರ್ಯವು ನನ್ನದು!

(ತೆರೆ ಬೀಳುವುದು).

---

# ಎರಡನೆಯ ಅಂಕ.

## ಮೊದಲನೆಯ ಪ್ರವೇಶ.

[ಸ್ಥಳ:—ಹಸ್ತಿನಾವತಿ, ಧೃತರಾಷ್ಟ್ರನ ಕಿರುಮನೆ.]

**ಧೃತ**—ಹಾಹಾ! ವಿಧಿಯೇ! ಶೂರರೂ ಧೀರರೂ ಆದ ನೂರು ಮಂದಿ ಮಕ್ಕಳಿದ್ದರೂ ಸಾರ್ಥಕವಾಗಲಿಲ್ಲ. ಎಲ್ಲರೂ ಕುಟಿಲ ಬುದ್ಧಿಯುಳ್ಳವರಾಗಬೇಕೆ? ಕಪಟದ್ಯೂತವನ್ನಾಡಿ ಪಾಂಡುಪುತ್ರರನ್ನು ವನವಾಸಕ್ಕಟ್ಟಿದರು. ಅವರಾದರೊ ಸತ್ಯಕ್ಕೋಸ್ಕರ ಹನ್ನೆರಡು ವರುಷ ಕಷ್ಟಪಟ್ಟರು. ಶ್ರೀಕೃಷ್ಣನ ಅನುಗ್ರಹವು ಅವರ ಮೇಲೆ ಪರಿಪೂರ್ಣವಾಗಿರುವುದು. ಕೃಷ್ಣನು ಅವತಾರಪುರುಷನೆಂಬುದನ್ನರಿಯರೆ? ಪಾಂಡುಪುತ್ರರೊಡನೆ ವೈರವೆಂದರೆ ಕೃಷ್ಣನೊಂದಿಗೆ ವೈರವಾಗಲಿಲ್ಲವೆ? ಕೃಷ್ಣನ ಕೂಡೆ ವೈರವನ್ನು ಕಟ್ಟಿಕೊಂಡು ಆರು ತಾನೆ ಬಾಳಬಲ್ಲರು?—ನಿಜವಾಗಿಯೂ, ನಮ್ಮ ಪುತ್ರರಿಗೆ ಅವಸಾನವು ಸಮೀಪಿಸಿತು,—ಇರಲಿ, ನಾನೊಂದು ಬುದ್ಧಿಮಾತು ಹೇಳಿಬಿಡುತ್ತೇನೆ.—ಸುಯೋಧನನು ಇನ್ನೂ ಬರಲಿಲ್ಲವಲ್ಲ! ಆ ಕುಬುದ್ಧಿಗಳೊಡನೆ ಏನು ಕುತಂತ್ರಗಳನ್ನು ನಡೆಸುತಿದ್ದಾನೆಯೊ!

(ಸುಯೋಧನನು ಪ್ರವೇಶಿಸುವನು.)

**ಸುಯೋ**—ಪಿತನೆ, ಸುಯೋಧನನು ವಂದಿಸುವನು.

**ಧೃತ**—ಆಹಾ, ಬಂದೆಯಾ, ಮಗನೆ? ಇಷ್ಟು ಸಾವಕಾಶವೇತಕ್ಕಾಯಿತು?

**ಸುಯೋ**—ಕೊಂಚ ರಾಜಕಾರ್ಯವಿದ್ದಿತು.

**ಧೃತ**—ಅದೇನು ನಾನು ಕೇಳಬಾರದೆ?

**ಸುಯೋ**—ವಿಶೇಷವೇನೂ ಇಲ್ಲ. ಸಂಜಯನು ಪಾಂಡವರ ಸಂಪತ್ತನ್ನೂ ಸಾಹಸವನ್ನೂ ಶ್ಲಾಘಿಸುತ್ತಿದ್ದನು. ಆತನನ್ನು ಸಭೆಯಿಂದ ಉಚ್ಚಾಟನಮಾಡಿಸಿ ನಮ್ಮ ಕರ್ಣಶಕುನಿಗಳೊಂದಿಗೆ ಕೊಂಚ ಮಂತ್ರಾಲೋಚನೆ ಮಾಡುವುದಕಿತ್ತು.

**ಧೃತ**—ಮಗೂ, ಸಂಜಯನು ತುಂಬ ಜ್ಞಾನಿಯು; ಬಲಾಬಲ ವಿಚಾರವಿಲ್ಲದೆ ಮಾತುಗಳನ್ನಾಡನು. ಅದೂ ಅಲ್ಲದೆ ಪಾಂಡುಪುತ್ರರ ಸಂಪತ್ತೂ ಸಾಹಸವೂ ಶ್ಲಾಘನೀಯವೆ ಸರಿ!

**ಸುಯೋ**—ಪಿತನೆ, ಇನ್ನೇನಾದರೂ ಇದ್ದರೆ ಹೇಳಬಾರದೆ? ಅವರು ಸಂಪನ್ನರೂ ಸಾಹಸಿಗಳೂ ಆಗುವುದಕ್ಕೆ ಈಜೆಗಿರುವವರು ಭೀರುಗಳಲ್ಲವೆ?

**ಧೃತ**—ಸಕಲಕ್ಕೂ ಶ್ರೀ ಕೃಷ್ಣನೆ ಸೂತ್ರಧಾರಿ. ಆತನೆ ಅವರಲ್ಲಿರುವಾಗ ಅವರಿಗೇನು ತಾನೆ ಕೊರತೆ?

**ಸುಯೋ**—ಕೃಷ್ಣನ ಮಾತು ಇನ್ನು ಪ್ರಯೋಜನವಿಲ್ಲ. ಆತನು ಯುದ್ಧಮಾಡುವುದಿಲ್ಲವೆಂದು ಒಪ್ಪಿಕೊಂಡಿರುತ್ತಾನಷ್ಟೆ!

**ಧೃತ**—ತಾನು ಮಾಡದಿದ್ದರೇನಾಯಿತು? ಎರಡನೆಯವನಿಂದ ಮಾಡಿಸುತ್ತಾನೆ.

**ಸುಯೋ**—ಎರಡನೆಯವನು ಬಂದರೆ ನಮ್ಮಲ್ಲಿ ಕರ್ಣಾದಿಗಳಿದ್ದಾರೆ.

**ಧೃತ**—ಮಗೂ, ನೀನು ಕರ್ಣಾದಿಗಳನ್ನು ನಂಬಿಕೊಂಡು ದುಡುಕಬೇಡ. ಗುಣಾವಗುಣಗಳು ಸಹವಾಸವನ್ನು ಹೊಂದಿಕೊಂಡಿವೆ. ಶಕುನಿಯು ಮಹಾ ಮತ್ಸರಿಯು. ನಿನಗೆ ಆತನು ಕೇವಲ ಆಪ್ತನು. ಆತನ ದುರ್ಬೋಧನೆಗಳೊಳಗಾಗಬೇಡ. ಶ್ರೀ ಕೃಷ್ಣನು ಪಾಂಡವರ ಪಕ್ಷಕ್ಕಿದ್ದ ಮೇಲೆ ನಿನಗೆಷ್ಟು ಮಾತ್ರಕ್ಕೂ ಜಯ ಸಿಕ್ಕಲಾರದು. ಭೀಷ್ಮಾಚಾರ್ಯರು, ದ್ರೋಣಾಚಾರ್ಯರು, ವಿದುರ—ಮೊದಲಾದವರನ್ನು ಕೇಳಿಕೊ.

**ಸುಯೋ**-- ಪಿತನೆ, ಪಾಂಡುಪುತ್ರರು ಮಾತ್ರ ಶೂರರು, ನಾವು ಅಲ್ಲರೆಂದೆಣಿಸಿರುವೆಯಲ್ಲವೆ? ಕರ್ಣನು ಸಾಮಾನ್ಯನೆ? ದ್ರೋಣಾಚಾರ್ಯರು ಗುರುಗಳಲ್ಲವೆ? ಅಶ್ವತ್ಥಾಮನೊಬ್ಬನೆ ಸಾಲನೆ? ನಾವು ಕೇವಲ ಹೇಡಿಗಳೆಂಬ ಅಭಿಪ್ರಾಯವಿದ್ದರೆ ಅದನ್ನಿಂದಿಗೆ ಬಿಟ್ಟುಬಿಡು.

**ಧೃತ**— ಮಗೂ, ನೀವೆಲ್ಲರೂ ವೀರರೆ ಅಹುದು. ಆದರೂ ಕೃಷ್ಣನೊಡನೆ ವೈರವು ಸಲ್ಲದು. ಹೇಗಾದರೂ ಸಂಧಿಯನ್ನೆ ಮಾಡಬೇಕಲ್ಲದೆ ಸಂಗ್ರಾಮ ಬೇಡ.

**ಸುಯೋ**— ಇಷ್ಟು ಹೇಳುವುದಕ್ಕೆ ತಾನೆ ನನ್ನನ್ನು ಕರೆಯಿಸಿದುದು? ನೀನೂ, ದ್ರೋಣಾಚಾರ್ಯರೂ ಭೀಷ್ಮಾಚಾರ್ಯರೂ,' ಕೃಪಾಚಾರ್ಯರೂ, ಸಂಜಯನೂ ಹೋಗಿ, ಧರ್ಮನನ್ನು ಮರೆಹೊಕ್ಕು ಬಾಳಿಕೊಂಡಿರಿ. ನಾವು ನಮ್ಮ ಕಾರ್ಯವನ್ನು ಮಾಡುತ್ತೇವೆ! ಇನ್ನು ನನಗನುಜ್ಞೆಯಾಗಲಿ! (ಹೋಗುವನು).

**ಧೃತ**— ಆಹಾ! ಗಾಂಧಾರಿಯು ಏತಕ್ಕಾಗಿ ಈತನನ್ನು ಸಾಕಿ ಸಲಹಿದಳೊ? ಅಂದೇ ಹಿಸುಕಿಬಿಟ್ಟಿದ್ದರೆ ಚೆನ್ನಾಗಿರುತಿತ್ತು!

---

# ಎರಡನೆಯ ಪ್ರವೇಶ.

[ಗೃಹ: ವಿದುರನೂ ಕನಕಾಂಗಿಯೂ.]

**ವಿದುರ**— ಶ್ರೀ ಕೃಷ್ಣನು ಹಸ್ತಿನಾವತಿಗೆ ಬರುತ್ತಾನಂತೆ. ಇಂದಾದರೂ ಆತನನ್ನು ಕಣ್ಣಾರೆ ಕಂಡು ಜನ್ಮ ಸಾರ್ಥಕ ಮಾಡಿಕೊಳ್ಳಬೇಕು.

**ಕನಕಾಂಗಿ**— ಆರಲ್ಲಿ ಇಳಿದುಕೊಳ್ಳುತ್ತಾನಂತೆ?

**ವಿದು**— ಆರಲ್ಲಿಯೊ, ತಿಳಿಯದು. ಆ ವಿಚಾರವನ್ನೇನೂ ಹೇಳಿ ಕಳುಹಿಲ್ಲ.

**ಕನ**— ಹಾಗಾದರೆ ಕೌರವನಲ್ಲಿ ಹೋದಾನು.

**ವಿದು**—ನಾನು ನಂಬಲಾರೆ. ಕೌರವನಿಗೆ ಕೇವಲ ವಿರೋಧ ಪಕ್ಷದವನು. ಭೀಷ್ಮಾಚಾರ್ಯರಲ್ಲಿಗೆ ಹೋದಾನು.

**ಕನ**—ಕೃಪಿಯು ತಮ್ಮಲ್ಲಿಗೆ ಬರಲಿಕ್ಕೆ ಸಾಕೆಂದು ಹೇಳಿದಳು. ಬೇಕಾದ ಏರ್ಪಾಡುಗಳನ್ನು ಮಾಡಿಸಿದ್ದಾರಂತೆ.

**ವಿದು**—ಮಾಡಿಸಲಿಕ್ಕೆ ಎಲ್ಲರೂ ಮಾಡಿಸಿದ್ದಾರೆ. ಆದರೆ ಆ ಪರಮಾತ್ಮನಿಗೆ ಅದರಲ್ಲಿ ಇಷ್ಟವೋ ಹೇಳಲಸಾಧ್ಯ.

**ಕನ**—ನಮ್ಮಲ್ಲಿಗೆ ಬರುವ ಹಾಗೆ ಇಲ್ಲವಲ್ಲ?

**ವಿದು**—ಬರಬಾರದೆಂದು ನಿನ್ನಿಷ್ಟವೆ?

**ಕನ**—ಹಾಗಲ್ಲ. ನಾವೇನು ಉಪಚಾರಮಾಡಬಲ್ಲೆವು? ನಮ್ಮಲ್ಲೇನು ಇರುವುದು?

**ವಿದು**—ಸಹಜ, ಅಂತಹ ಶ್ರೀಮಂತರುಗಳಿರುವಾಗ ನಮ್ಮಲ್ಲಿಗೆ ಬಂದಾನೆಂದು ಸ್ವಪ್ನದಲ್ಲಿ ಕೂಡ ಎಣಿಸುವುದಕ್ಕೆ ಬಾರದು.

**ಕನ**—ಕೌರವನಿಂದ ಕೊಂಚ ಐಶ್ವರ್ಯ ಕೇಳಿಕೊಳ್ಳಬಾರದಿತ್ತೇ? ಹಾಗಿದ್ದರೆ ನಾವು ಕೂಡ ಇತರರಂತೆ ತಲೆಯೆತ್ತಿಕೊಂಡಿರಬಹುದಿತ್ತು!

**ವಿದು**—ಐಶ್ವರ್ಯವು ಏನು ತಾನೆ ಮಾಡೀತು! ಅದರಲ್ಲಿಯೂ ಕೌರವನಲ್ಲಿ ಕೇಳಿಕೊಳ್ಳುವುದೆ? ಆತನು ಸಾಕ್ಷಾತ್ ಕಲಿಪುರುಷನು! ಆತನೊಡನೆ ಕೇಳುವುದಕ್ಕಿಂತ ಉಪವಾಸಬಿದ್ದು ಪ್ರಾಣತ್ಯಾಗಮಾಡುವುದೆ ಮೇಲು!

**ಕನ**—ಹಾಗಾದರೆ ಆತನಲ್ಲಿಗೇಕೆ ನಿತ್ಯವೂ ಹೋಗಿ ಬಂದು—ನಮ್ಮ ಕೌರವ, ನಮ್ಮ ಕೌರವ—ಎಂದುಕೊಂಡಿರುವುದು? ಪಾಂಡವರ ಬಳಿಗಾದರೂ ಹೋಗಬಾರದೆ?

**ವಿದು**—ಅದು ಹೇಗಾದೀತು? ಇದು ತನಕವೂ ಕೌರವನಲ್ಲಿಯೆ ಇದ್ದುಕೊಂಡು, ಈಗ ಮಾತ್ರ ಪಾಂಡವರ ಬಳಿಗೆ ಹೋದರೆ ಸ್ವಾಮಿದ್ರೋಹ ಉಂಟಾಗುವುದಲ್ಲವೆ?

**ಕನ**—ಇಂತಹ ಸ್ವಾಮಿಯ ಸೇವೆ ಮಾಡುವುದಕ್ಕಿಂತ ಚಾಂಡಾಲ ಸೇವೆಯೆ ಉತ್ತಮವೆಂದು ಕಾಣುತ್ತಿದೆ!

**ವಿದು**—ಹಾಗನ್ನಬೇಡ. ಕೌರವನು ಸಕಲವನ್ನೂ ಬಲ್ಲವನು, ಶೂರನೂ ಅಹುದು. ಆದರೆ ಆತನ ಸಹವಾಸ ಮಾತ್ರ ಒಳ್ಳೆಯದಲ್ಲ. ಭೀಷ್ಮಾಚಾರ್ಯರು, ದ್ರೋಣಾಚಾರ್ಯರು—ಇವರ ಮಾತುಗಳನ್ನು ಕೇಳುವ ಹಾಗಿಲ್ಲ. ಹಾಗಿದ್ದರೂ ಆಪತ್ಕಾಲದಲ್ಲಿ ಇಲ್ಲದಂತಾಗಬಾರದೆಂದು ಅವರು ಆತನನ್ನು ತೊರೆಯಲಿಲ್ಲ.

**ಕನ**—ಹಾಗಾದರೆ ಅವರಿಗೆಲ್ಲ ಕೌರವನ ನಡತೆಯು ಸರಿಬೀಳುವುದಿಲ್ಲವೆ?



**ವಿದು**—ಸರಿಬೀಳುವುದೆಂದರೆ ಹೇಗೆ? ಅವರ ಮನಸ್ಸೆಲ್ಲ ಪಾಂಡವರಲ್ಲಿರುವುದು; ಬರಿಯ ಕಾಯ ಮಾತ್ರ ಕೌರವರಲ್ಲಿ.—(**ಕೊಂಚ ಆಲೈಸಿ**)-ಹೊರಗೇನೊ ಗಲಭೆ ಕೇಳಿಸುವಂತಿದೆ! ಅದೇನು ನೋಡು.

(**ಕನಕಾಂಗಿಯು ಹೋಗಿ ಬರುವಳು**)

**ಕನ**—ಶ್ರೀ ಕೃಷ್ಣನು ಆಗಲೆ ಬಂದುಬಿಟ್ಟನು.

**ವಿದು**—ಏನು ನಮ್ಮಲ್ಲಿ ಬಂದನೆ? ಎಲ್ಲಿ? ಪಾದಪ್ರಕ್ಷಾಲನಕ್ಕೆ ನೀರು ತೆಗೆದುಕೊಂಡು ಬಾ.

(**ಕನಕಾಂಗಿಯು ತರುವಳು—ಕೃಷ್ಣನು ಪ್ರವೇಶಿಸುವನು—ವಿದುರನು ಸಾಷ್ಟಾಂಗವೆರಗುವನು**).

**ಕೃಷ್ಣ**—ವಿದುರಾ! ಏಳು, ಎದ್ದೇಳು.

**ವಿದು**—ಸ್ವಾಮಿ ಪರಮಾತ್ಮಾ, ಬಡವರ ಮನೆಗೆ ಭಾಗೀರಥಿ ಬಂದಂತಾಯಿತು!

**ಕೃಷ್ಣ**—ನಿನ್ನಲ್ಲಿಗಲ್ಲದೆ ಮತ್ತಾರಲ್ಲಿಗೆ ಬರಲಿ? ನೀನೆ ನನ್ನ ಕೇವಲ ಭಕ್ತನಲ್ಲವೆ?

**ವಿದು**—ಸ್ವಾಮಿ, ಮಹಾನುಭಾವರುಗಳು ಅನೇಕರಿರುವಾಗ ಆರಲ್ಲಿಗೂ ಹೋಗದೆ ನನ್ನಲ್ಲಿಗೆನೆ ಬಂದುದು ಕೇವಲ ದಾಸನ ಮೇಲಣ ಅನುಗ್ರಹದಿಂದಲ್ಲವೆ?

**ಕೃಷ್ಣ**—ಅವರೆಲ್ಲರೂ ಈಗ ನನಗೆ ವಿರೋಧಿಗಳು. ನನ್ನ ಕಾರ್ಯವು ಅಂತಹದು.

**ವಿದು**—ಸರ್ವವೂ ಬಲ್ಲವನು ಆವುದರಲ್ಲಿ ತಾನೆ ತಪ್ಪಿಬಿದ್ದಾನು?

**ಕೃಷ್ಣ**—ನಮ್ಮತ್ತೆಯು ಸುಖವಾಗಿದ್ದಾಳೇನು? ಇದುತನಕವಂತೂ ಕಷ್ಟಪಟ್ಟಳು. ಇನ್ನೂ ಕೆಲವು ದಿನಗಳ ತನಕ ಸಹಿಸಿಕೊಳ್ಳಲಿ. ಆಕೆಯ ಮಕ್ಕಳಿಗೆ ಏನೊಂದು ಹಾನಿಯೂ ಬಾರದಂತೆ ನೋಡಿಕೊಳ್ಳುವ ಭಾರವು ನನ್ನದು. ಈ ಮಾತುಗಳನ್ನಾಕೆಗೆ ತಿಳುಹಿಬಿಡು.

**ವಿದು**—ಪರಮಾತ್ಮನದೊಂದು ಅನುಗ್ರಹವಿದ್ದರೆ ಸಾಲದೆ? ಇಂದು ನಾನು ಧನ್ಯನೆ ಸರಿ. ಹಲವು ವರ್ಷಗಳು ತಪಸ್ಸುಮಾಡಿದರೂ ಕೂಡ ನಿನ್ನೊಂದು ದರ್ಶನವು ಕೇವಲ ದುರ್ಲಭ! ಹೀಗಿರುವಾಗ ನನ್ನ ಭಾಗ್ಯಕ್ಕೇನು ಕಡಿಮೆ?

**ಕೃಷ್ಣ**—ಇದೇನು, ವಿದುರಾ? ಕೇವಲ ಬಾಯುಪಚಾರಗಳಿಂದ ತೀರಿತಲ್ಲ? ಆತಿಥ್ಯವನ್ನು ಪೂರೈಸಬೇಡವೆ?

**ವಿದು**—ಸರ್ವಸ್ವತಂತ್ರನಾದ ನಿನಗೆ ನಾನೇನು ಸತ್ಕಾರಮಾಡಲಿ? ನನ್ನ ಸ್ಥಿತಿಯು ನಿನಗೆ ತಿಳಿದಿರುವುದು.

**ಕೃಷ್ಣ**—ಬಹಳ ದೂರದಿಂದ ಬಂದಿದ್ದೇನೆ. ಏನಾದರೂ ಫಲಾಹಾರಕ್ಕಿದ್ದರೆ ಕೊಡಬಾರದೆ?

**ವಿದು**—ಸ್ವಾಮಿ, ನಾನೇನು ಕೊಡಲಿ? ಏನೆ? ಒಳಗೇನಿದೆ?

**ಕನ**—ರವಷ್ಟು ಹಾಲಿರಬೇಕು.

**ವಿದು**—ಅದನ್ನಾದರೂ—ಚಿಂತಿಲ್ಲ-ತಂದುಕೊಡು, ನೋಡೋಣ.

(ತಂದು ವಿದುರನ ಕೈಗೆ ಕೊಡುವಳು).

**ವಿದು**—ಕೃಷ್ಣಾ, ನನ್ನ ಅವಸ್ಥೆಯು ನಿನಗೆ ತಿಳಿದಿರುವುದು. ನನ್ನಲ್ಲಿರುವುದು ಇಷ್ಟೆ ಸರಿ.

**ಕೃಷ್ಣ**—ಮನಃಪೂರ್ವಕವಾಗಿ ಕೊಡುವುದು ಬಂದೆಳ್ಳಿನಷ್ಟಾದರೂ ಪರ್ವತಪ್ರಮಾಣವಾಗುವುದಲ್ಲವೆ?

**ವಿದು**— ಇಂತಹ ಅಲ್ಪವಾದುದನ್ನು ಹೇಗೆ ತಾನೆ ಕೊಡಲಿ?

**ಕೃಷ್ಣ**— ಚಿಂತಿಲ್ಲ. ಕೊಡು. (ಕುಡಿಯುವನು). ಇದೊ ನನಗೆ ಸಾಕು, ಇನ್ನೂ ಕೊಂಚ ಉಳಿದಿದೆ. ನೀವು ಉಪಯೋಗಿಸಿಕೊಳ್ಳಿರಿ.

**ವಿದು**— ನಿನ್ನ ಮಹಿಮೆಯನ್ನು ಏನೆಂದು ಹೇಳಲಿ? ನಾವು ಕೊಟ್ಟದ್ದು ಒಂದು ಕುಡಿತೆಯಷ್ಟು ಕೂಡ ಇರಲಿಲ್ಲ. ಬ್ರಹ್ಮಾಂಡವನ್ನೆ ಧರಿಸಿ ಕೊಳ್ಳತಕ್ಕ ನಿನ್ನ ಹೊಟ್ಟೆಯೊಳಗೆ ಇಷ್ಟು ಹಾಲು ಕೂಡ ಹಿಡಿಯಲಾರದೆ ಹೋಯಿತು!

**ಕೃಷ್ಣ**— ಅದಿರಲಿ, ಈಗ ಕೌರವನಲ್ಲಿಗೆ ಹೋಗಬೇಕು.

**ವಿದು**— ದಾಸನು ಆವುದಕ್ಕೂ ಸಿದ್ಧನಾಗಿದ್ದಾನೆ.

**ಕೃಷ್ಣ**— ನಾನು ಬರುವುದಿಲ್ಲ. ನೀನು ಹೋಗಿ ಆತನ ಸಮಯವನ್ನು ತಿಳಿದುಕೊಂಡು ಬಾ.

**ವಿದು**— ಆಜ್ಞೆ, ಈಗಲೆ ಬಂದೆ.

[ಹೋಗುವನು.]

---

# ಮೂರನೆಯ ಪ್ರವೇಶ.

---

(ಸ್ಥಳ:— ಅರಮನೆಯ ಹೆಬ್ಬಾಗಿಲು. **ಕೌರವ, ಕರ್ಣ, ಅಶ್ವತ್ಥಾಮ, ದುಶ್ಶಾಸನ,** ಶಕುನಿ— ಮಾತನಾಡುತ್ತ ಪ್ರವೇಶಿಸುವರು.)

**ಸುಯೋಧನ**— ಕುಲಕ್ಕೆ ತಕ್ಕ ಆಚಾರ, ಆಚಾರಕ್ಕೆ ತಕ್ಕ ಬುದ್ಧಿ!

**ಕರ್ಣ**— ಕುಲವಾವುದು?

**ಅಶ್ವ**— ಗೋವಳರ ಕುಲ.

**ದುಶ್ಯಾ**—ಆಚಾರವಾವುದು?

**ಕರ್ಣ**—ಚೋರ ಶಿಖಾಮಣಿ!

**ಅಶ್ವ**—ಬುದ್ಧಿ ಯಾವುದು?

**ದುಶ್ಯಾ**—ಕುಟಿಲ ಬುದ್ಧಿ!

**ಶಕುನಿ**—ಹುಟ್ಟುಗುಣ ಗಟ್ಟ ಹತ್ತಿದರೂ ಬಿಡದು.

**ದುಶ್ಯಾ**—ಮಾವಯ್ಯನ ಮಾತು ಚೆನ್ನಾಗಿ ಒಪ್ಪುತ್ತಿದೆ.

**ಕರ್ಣ**—ಕರಿಯ ನಾಯಿ ಎಂದಾದರೂ ಬಿಳಿದಾಗುವುದಕ್ಕಿದೆಯೆ?

**ಸುಯೋ**—ಸರಿ, ಸರಿ! ಆ ಮೂರ್ಖನು ವಿದುರನಲ್ಲಿಗೇಕೆ ಹೋಗ ಬೇಕು?

**ಅಶ್ವ**—ನಮ್ಮಲ್ಲಿಗೆ ಬಂದಾನೆಂದು ನಿಶ್ಚಯಮಾಡಿಕೊಂಡಿದ್ದೆವು.

**ದುಶ್ಯಾ**—ನಾವು ಏನೆಲ್ಲ ಏರ್ಪಾಡು ಮಾಡಿದ್ದೆವು!

**ಸುಯೋ**—ಚಿಂತಿಲ್ಲ: ನಾವಂತೂ ಕೇವಲ ವೈರಿಗಳು; ಕರ್ಣನಲ್ಲಿಗೆ ಹೋಗಬಾರದಿತ್ತೆ?

**ದುಶ್ಯಾ**—ಕರ್ಣನು ಕೌರವರ ಮಿತ್ರನು.

**ಸುಯೋ**—ಮಾವಯ್ಯನಲ್ಲಿಗೆ ಹೋಗಬಾರದಿತ್ತೆ?

**ಶಕುನಿ**—ನನ್ನಲ್ಲಿಗೆ ಆತನಿಗೆ ಇಷ್ಟವಿಲ್ಲ.

**ಸುಯೋ**—ದ್ರೋಣಾಚಾರ್ಯರು ಗುರುಗಳಷ್ಟೆ! ಉಭಯ ಪಕ್ಷ ದವರಿಗೂ ಸಮಾನ. ಅವರಲ್ಲಿ ಉಳುಕೊಳ್ಳಬಹುದಿತ್ತು.

**ಕರ್ಣ**—ಅದು ನ್ಯಾಯ.

**ಸುಯೋ**—ಭೀಷ್ಮಾಚಾರ್ಯರಲ್ಲಿ ಇಳಿಯುವುದಕ್ಕೇನು ಆಕ್ಷೇಪಣೆ?

**ಶಕುನಿ**—ನಾನು ಹೇಳಲಿಲ್ಲವೆ? ಅವರವರ ಯೋಗ್ಯತೆಗೆ ಸರಿ ಯಾಗಿ ಅವರವರು ನಡೆಯುತ್ತಾರೆ.

**ಸುಯೋ**—ಅವನು ಗೋವಳ, ಇವನು ಶೂದ್ರ!

**ದುಶ್ಶಾ**—ಒಬ್ಬನು ದನಕಾಯುವವನು. ಇನ್ನೊಬ್ಬನು ಉಳುವವನು—ಇಬ್ಬರಿಗೂ ಗಂಟು!

**ಕರ್ಣ**—ಅದೋ ವಿದುರನು ಬರುತ್ತಾನೆ. ಏನೊ ವಿಶೇಷವಿರಬೇಕು.

**ವಿದುರ**—(ಪ್ರವೇಶಿಸಿ) ಕೌರವೇಶ್ವರನು ಜಯಶೀಲನಾಗಲಿ!

**ಸುಯೋ**—ಏನು ಚಿತ್ತೈಸಿಬಿಟ್ಟಿತು! ಗೋವಳನಿಲ್ಲಿಲ್ಲವಲ್ಲ?

**ವಿದುರ**—ರಾಜನೆ! ಇಂತಹ ಮಾತುಗಳು ನಿನ್ನ ಬಾಯಿಂದ ಹೊರಡತಕ್ಕವುಗಳಲ್ಲ.

**ಸುಯೋ**—ಶೂದ್ರನ ನೀತಿ ಗೋವಳನಿಗಾದೀತು.

**ವಿದು**—ಶ್ರೀ ಕೃಷ್ಣನ ಮಹಿಮೆಯು ನಿನಗೆ ಚೆನ್ನಾಗಿ ತಿಳಿದಿರುವುದು. ಆದರೂ ಇಂತಹ ಮಾತುಗಳನ್ನಾಡುತ್ತಿರುವೆ!

**ಸುಯೋ**—ಓಹೊ! ಚೆನ್ನಾಗಿ ಬಲ್ಲೆ. ಚೌರ್ಯಧುರಂಧರ! ಮೊಸರಿನ ಗಡಿಗೆಗಳೆ ಮಾಯವಾಗುತ್ತಿವೆಯಂತೆ.

**ವಿದು**—"ಸಂಸರ್ಗಜಾ ದೋಷಗುಣಾ ಭವಂತಿ"—ನೀಚರ ಸಹವಾಸ ಬೇಡ; ಕೊಂಚ ಯೋಚಿಸಿನೋಡು.

**ಶಕುನಿ**—ಎಲ್ಲರೂ ನೀಚರು, ನೀನು ಮಾತ್ರ ಸುಭಗ!

**ವಿದು**—ಕೃಷ್ಣನನ್ನು ನಿಂದಿಸುವುದು ಯುಕ್ತವಲ್ಲ.

**ಸುಯೋ**—ಸಾಕು, ಸಾಕು! ನೀನು ಬಂದ ಕಾರ್ಯವೇನು?

**ವಿದು**—ಶ್ರೀ ಕೃಷ್ಣನು ನಿನ್ನನ್ನು ನೋಡುವುದಕ್ಕೆ ಎಂದು ಬರಬೇಕೆಂದು ಕೇಳುತ್ತಾನೆ.

**ಸುಯೋ**—ನಾಳೆಯ ದಿನ ಬರಲಿ.

**ವಿದು**—ಒಳ್ಳೆಯದು, ಹಾಗೆಯೆ ಆಗಲಿ. ( ಹೋಗುವನು)

**ಶಕುನಿ**—ಪಾಟಾಳಿಗೊಂದು ಮೋಟಾಳು—ಮೋಟಾಳಿಗೊಂದು ಮೋಟು ಕುದುರೆ! ಧರ್ಮರಾಯನಿಗೊಬ್ಬ ಮಿತ್ರ. ಆ ಮಿತ್ರನಿಗೊಬ್ಬ ಬಂಟ!

**ದುಶ್ಶಾ**—ಆ ಕಳ್ಳನಿಗಾದರೂ ಬುದ್ಧಿ ಕಲಿಸದಿರಬಾರದು.

**ಸುಯೋ**—ನಾಳೆ ಸಭೆಗೆ ಬರಲಿ, ಮುಖ ಕೆಳಗಿಳಿಸಿಬಿಡಬೇಕು.

**ಶಕುನಿ**—ಹಾಗೆಯೆ ಸರಿ.

**ಕರ್ಣ**—ಆದರೆ ಸಭೆಗೆ ಬಂದವನನ್ನು ಮಾನಭಂಗಮಾಡಬಾರದಷ್ಟೆ?

**ಶಕುನಿ**—ಅದು ಧರ್ಮ, ಆದರೆ ಗೋವಳರಿಗೆ ಧರ್ಮವೆ ಬೇರೆ!

**ಅಶ್ವ**—ಗುರುಹಿರಿಯರಿದಿರಿಗೆ ಹೇಗಾದೀತು?

**ಸುಯೋ**—ಅವರನ್ನಾರು ಕೇಳುತ್ತಾರೆ?

**ಶಕುನಿ**—ಇದುತನಕ ಕೇಳಿದ್ದರಲ್ಲವೆ ಇನ್ನು ಮುಂದೆ ಕೇಳುವರು!

**ಸುಯೋ**—ಇರಲಿ. ನಾಳೆ ನೋಡೋಣ. (ಎಲ್ಲರೂ ಹೋಗುವರು.)

---

# ನಾಲ್ಕನೆಯ ಪ್ರವೇಶ.

---

(ಸ್ಥಳ:—ಕೌರವನ ಆಸ್ಥಾನ. ಕೌರವ, ಧೃತರಾಷ್ಟ್ರ, ಭೀಷ್ಮ, ದ್ರೋಣ, ಕೃಪ, ಸಂಜಯ, ಕರ್ಣ, ಶಕುನಿ, ದುಃಶ್ಶಾಸನ, ಅಶ್ವತ್ಥಾಮ – ಕುಳಿತಿರುವರು.)

**ಸುಯೋ**—ಗುರುಹಿರಿಯರೊಡನೆ ನನ್ನದೊಂದು ವಿಜ್ಞಾಪನೆಯಿರುವುದು. ಪಾಂಡವರು ಸಂಧಿಗೋಸ್ಕರ ಕೃಷ್ಣನನ್ನು ಕಳುಹಿಸಿರುವರಷ್ಟೆ! ಈಗ ಸಂಧಿಯೊ ಸಂಗ್ರಾಮವೊ ಎಂಬುದರ ವಿಷಯ ತಮ್ಮೆಲ್ಲರ ಅಭಿಪ್ರಾಯ ತಿಳಿಸಿದರಾಗುತಿತ್ತು.

**ಭೀಷ್ಮ**—ನಮ್ಮ ಅಭಿಪ್ರಾಯಗಳನ್ನು ನಾವು ಮೊದಲೆ ಹೇಳಿರುತ್ತೇವೆಯಷ್ಟೆ!

**ಸುಯೋ**— ಹಾಗಾದರೆ ಸಂಧಿಯಾಗಬೇಕೆನ್ನುವಿರಲ್ಲವೆ?

**ಭೀಷ್ಮ**—ಪಾಂಡವರಿಗೆ ಕೃಷ್ಣನು ಬೆಂಬಲನಾಗಿದ್ದಾನೆ. ಆದುದರಿಂದ ಸಂಗ್ರಾಮದಲ್ಲಿ ನಮಗೆ ಜಯವಾದೀತೆಂಬುದನ್ನು ಸ್ವಪ್ನದಲ್ಲಿ ಕೂಡ ಎಣಿಸುವುದಕ್ಕೆ ಅವಕಾಶವಿಲ್ಲ.

**ಕರ್ಣ**—ಕೃಷ್ಣನಿದ್ದರೇನಾಯಿತು? ಆತನೊಡನೆ ಯುದ್ಧಮಾಡುವ ಸಮರ್ಥರು ನಮ್ಮಲ್ಲಿರಲಾರರೆ?

**ಶಕುನಿ**— ಸರಿ ಹೇಳಿದೆ ಕರ್ಣಾ!

**ದ್ರೋಣ**—ಕೃಷ್ಣನು ಆರೆಂಬುದನ್ನು ಕೊಂಚ ಜ್ಞಾಪಿಸಿಕೊಳ್ಳಬಾರದೆ?

**ಸುಯೋ**--ಆದರೆ ಆತನು ಯುದ್ಧಮಾಡಕೂಡದಷ್ಟೆ?

**ದ್ರೋಣ**—ಮೂರು ಲೋಕಗಳೂ ಆತನ ಇಚ್ಛಾಮಾತ್ರದಲ್ಲಿವೆ. ಅಂತಹ ಮಹಾತ್ಮನೂ ಯುದ್ಧಮಾಡಬೇಕೆ?

**ಕರ್ಣ**—ಮಾಗಧನಿದಿರಿಗೆ ಆ ಮಾಹಾತ್ಮ್ಯವು ಎಲ್ಲಿ ಅಡಗಿಕೊಂಡಿತು?

**ದ್ರೋಣ**—ಅದನ್ನು ನಿನ್ನಂತಹರು ತಿಳಿದುಕೊಳ್ಳಲಾರರು. ಆತನಿಗಿಂತಲೂ ನೀನೆ ಶೂರನೆಂದೆಣಿಸೋಣ—ಕೃಷ್ಣನಾದರೊ ಬಾಲ್ಯದಲ್ಲಿಯೆ ಎಷ್ಟೋ ಮಂದಿ ದೈತ್ಯರನ್ನು ಸಂಹಾರಮಾಡಿದನು. ನೀನಿದುವರೆಗೆ ಎಷ್ಟು ಮಂದಿ ದೈತ್ಯರನ್ನು ಕೊಂದಿರುವೆ? ಬೆರಳು ಮಡಿಸು ನೋಡೋಣ!

**ಕರ್ಣ** -- ಅದು ಅವರವರ ಕರ್ಮಾನುಸಾರ—ಶಾಪನಿಮಿತ್ತದಿಂದ ಹಾಗಾಯಿತು.

**ದ್ರೋಣ**—ಮೊನ್ನೆ ಗೋಗ್ರಹಣದಲ್ಲಿ ಅರ್ಜುನನ ಮೋಹನಾಸ್ತ್ರಕ್ಕೆ ಮೋಹಿಸಿಹೋದುದು ಕೂಡ ಶಾಪನಿಮಿತ್ತವಲ್ಲವೆ?

**ಸುಯೋ**—ಆಚಾರ್ಯರೆ, ನಾವು ಪ್ರಕೃತ ಕಾರ್ಯವನ್ನು ಯೋಚಿಸಿದರಾಗಬಹುದಲ್ಲವೆ?

**ಭೀಷ್ಮ**—ಸುಯೋಧನ, ನಿನ್ನಲ್ಲಿ ಸಮರ್ಥರಿದ್ದಾರೆಂದು ಭಾವಿಸ ಬೇಡ. ಕೃಷ್ಣನಿದಿರಿಗೆ ಆರ ಸಾಹಸವೂ ನಡೆಯಲಾರದು.

**ಸುಯೋ**—ಏನು ಕೃಪಾಚಾರ್ಯರೆ!

**ಕೃಪ**—ಭೀಷ್ಮಾಚಾರ್ಯರು ಹೇಳಿದ ಮಾತು ಸಹಜವೇ ಸರಿ.. ಸಂಧಿಯೆ ಸರ್ವೋತ್ಕೃಷ್ಟ!

**ಶಕುನಿ**—ಕ್ಷತ್ರಿಯರು ತಮ್ಮ ಪೌರುಷವನ್ನೆಂದೂ ಬಿಡಕೂಡದು. ವನವಾಸದಲ್ಲಿದ್ದ ಆ ಕಾಡುಮನುಷ್ಯರೊಂದಿಗೆ ನಮ್ಮಂತಹ ಕ್ಷತ್ರಿಯರಿಗೆ ಸಂಧಿಯೇ? ಯುದ್ಧಮಾಡುವ ಸಾಹಸವು ಅವರಲ್ಲಿರುತ್ತಿದ್ದರೆ ಸಂಧಿಯ ಮಾತನ್ನೇಕೆ ಎತ್ತುತ್ತಿದ್ದರು? ಕ್ಷತ್ರಿಯರ ಪಂಥವನ್ನು ಮರೆಸಬಾರದಾಗಿತ್ತೆ?

**ಕೃಪ**—ನಮ್ಮಲ್ಲಿ ಅಂತಹ ಶೂರರು ಆರಿರುವರು?

**ಶಕುನಿ**—ಸರಿ, ಸರಿ. ಕರ್ಣನಿಲ್ಲವೆ? ಅಶ್ವತ್ಥಾಮನು ಸಾಕ್ಷಾತ್ ಈಶ್ವರಾವತಾರ. ಭೀಷ್ಮಾಚಾರ್ಯರು ವೃದ್ಧರಾದರೂ ಅವರ ಸಾಮರ್ಥ್ಯವು ಯೌವನದಲ್ಲಿಯೆ ಇರುವುದು. ದ್ರೋಣಾಚಾರ್ಯರೂ ನೀವೂ ಎಲ್ಲರಿಗೂ ಗುರುಗಳು, ನನ್ನಿಂದಾಗುವ ಸಾಹಸ ನಾನು ಮಾಡುವುದಿಲ್ಲವೆ?

**ದುಶ್ಶಾ**—ಮಾವಯ್ಯ, ಅವರೆಲ್ಲರಿಗೂ ಸಂಧಿಯೆ ಇಷ್ಟ. ಹೇಗೆ ತಾನೆ ಮನಃಪೂರ್ವಕವಾಗಿ ಯುದ್ಧ ಮಾಡಿಯಾರು?

**ಶಕುನಿ**—ಬೇಡ; ನಾವೆಲ್ಲರಿದ್ದೇವಲ್ಲ!

**ಕೃಪ**—ನಿಮ್ಮೆಲ್ಲರನ್ನು ಮೊನ್ನೆಯೆ ಪರೀಕ್ಷೆಮಾಡಿಯಾಗಿದೆ. ಅರ್ಜುನನೊಬ್ಬನೊಡನೆಯೆ ಕಾದುವುದಕ್ಕೆ ನಿಮ್ಮಿಂದಾಗಲಿಲ್ಲ.

**ಸುಯೋ**—ಕೃಪಾಚಾರ್ಯರೆ, ಜಯಾಪಜಯಗಳು ಪರಮಾತ್ಮನೆ ಬಲ್ಲ. ಆದರೆ, ಕ್ಷಾತ್ರಧರ್ಮಕ್ಕನುಸಾರವಾಗಿ ನಡೆಯಬೇಕಲ್ಲವೆ?

**ಕೃಪ**—ಸುಯೋಧನ, ನೀನಿವರನ್ನು ನಂಬಿಕೊಂಡಿರಬೇಡ. ಇವರ ಮಾತುಗಳು ಈಗ ಅಮೃತದಂತಿದ್ದರೂ ಮುಂದಕ್ಕೆ ವಿಷವಾಗಿ ಪರಿಣಮಿಸಿಯಾವು!

**ಸಂಜಯ**—ರಾಜನೆ, ಸಂಧಿಯೆ ಉತ್ತಮಪಕ್ಷವು. ಪಾಂಡವರಿಗೆ ದೈವಬಲವು ಚೆನ್ನಾಗಿರುವುದು. ಆದುದರಿಂದ ನಮಗೆಂದಿಗೂ ಜಯ ಸಿಕ್ಕಲಾರದು.

**ಅಶ್ವ**—ದೈವಬಲ ಅವರಿಗೆ ಮಾತ್ರವೆಂದರೇನು? ನಮಗೂ ಏತಕ್ಕಿರಬಾರದು?

**ದ್ರೋಣ**—ಅಶ್ವತ್ಥಾ, ಕೊಂಚ ಯೋಚಿಸಿ ಮಾತನಾಡಬಾರದೆ?

**ಅಶ್ವ**—ಪಿತನೆ, ಕ್ಷಮಿಸು! ತಿಳಿಯದೆ ಹೇಳಿದೆನು.

**ಕರ್ಣ**—ರಾಜನೆ, ದೈವಬಲವು ಅವರಿಗೆಷ್ಟು ಬೇಕಾದರೂ ಇರಲಿ; ನಮಗೆ ಸಂಗ್ರಾಮವೆ ಸರಿ. ಆ ಭಿಕ್ಷುಕರೊಡನೆ ಎಷ್ಟು ಮಾತ್ರಕ್ಕೂ ಸಂಧಿಯಾಗಕೂಡದು!

**ಸುಯೋ**—ಶಹಭಾಸ್! ಕರ್ಣ! ಹಾಗೆಯೆ ಸರಿ!

**ಶಕುನಿ**—ಚೆನ್ನಾಗಿ ಹೇಳಿದೆ. ಆ ಪಾಂಡವರಿಗೆ ವನವಾಸವೆ ಗತಿ!

**ಧೃತ**—ಮಗನೆ, ಈ ಕುಬುದ್ಧಿಗಳ ಮಾತುಗಳಲ್ಲಿ ವಿಶ್ವಾಸವಿಟ್ಟು ವ್ಯರ್ಥವಾಗಿ ಕೆಟ್ಟು ಹೋಗಬೇಡ.

**ಸುಯೋ**—ಪಿತನೆ, ನಿಮ್ಮನ್ನು ಮಾತನಾಡಿಸಿದವರಾರು? ಸುಮ್ಮನೆ ಕುಳಿತುಕೊಂಡಿರಬಾರದೆ?

**ಧೃತ**—ಹಾ ಹಾ! ವಿಧಿಯೆ! ನನ್ನಂತಹ ಪಾಪಿಯು ಎಲ್ಲಿಯಾದರೂ ಇರುವನೆ? ನೂರು ಮಂದಿ ಮಕ್ಕಳು! ಏನು ಪ್ರಯೋಜನ? ಭರತಾನ್ವಯಕ್ಕೆ ಕಲಂಕವನ್ನೆ ತರುವಂತಹರು! ಗುರುಹಿರಿಯರ ಮಾತುಗಳನ್ನು ಕೇಳುವವರಲ್ಲ! ಒಂದಕ್ಕೆ ಹತ್ತು ಉತ್ತರ ಕೊಡುತ್ತಾರೆ! ಲೋಕದಲ್ಲಿ ಮಗನು ತಂದೆಯೊಡನೆ ಮಾತನಾಡುವುದು ಈ ವಿಧವಾಗಿಯೆ ಇರುವುದೆ? ಹಾ ಹಾ! ನನಗಿನ್ನೂ ಅವಸಾನ ಬಾರದಲ್ಲ! ಇವರ ದುಷ್ಕೃತ್ಯಗಳನ್ನು ನೋಡಲಾರೆ!

**ಸುಯೋ**—ಕರ್ಣ, ನಮಗಂತೂ ಸಂಗ್ರಾಮವೇ ಸರಿ! ಯಾರಾರು ಇಷ್ಟ ಪಡುವುದಿಲ್ಲವೋ ಅವರೆಲ್ಲರೂ ಧರ್ಮಜನ ಮರೆಹೊಕ್ಕು ಬಾಳಲಿ!

**ಕಂಚುಕಿ**—(ಪ್ರವೇಶಿಸಿ) ರಾಜನೆ, ವಿಜಯಿಯಾಗು! ಶ್ರೀ ಕೃಷ್ಣನು ದಯೆಮಾಡಿಸುತ್ತಿರುವನು!

(ವಿದುರನೊಡನೆ ಕೃಷ್ಣನು ಪ್ರವೇಶಿಸುವನು. ಕೌರವ ವಿನಾ ಎಲ್ಲರೂ ನಿಲ್ಲುವರು.)

**ಕೃಷ್ಣ**—(ಸ್ವಗತ) ಆಹಾ! ಈ ಮದಾಂಧನು ನನ್ನನ್ನು ಅವಮಾನಗೊಳಿಸಬೇಕೆಂದಿರುವನು. ಗುರುಜನಗಳು ಎದ್ದು ನಿಂತರೂ ಈತನು ಮಾತ್ರ ಅಹಂಭಾವದಿಂದ ಕುಳಿತಿರುವನು! ಇರಲಿ, ತಾನಾಗಿಯೆ ನನ್ನ ಕಾಲಬಳಿ ಬೀಳುವಂತೆ ಮಾಡುತ್ತೇನೆ.

(ಭೂಮಿಯನ್ನು ಉಂಗುಟದಿಂದ ಒತ್ತುತ್ತಲೆ ಕೌರವನು ಮುಕ್ಕರಿಸಿಕೊಂಡು ಬೀಳುವನು.)

**ಕೃಷ್ಣ**—ಸುಯೋಧನ, ಏನಿದು? ಗೋವಳನು ಇಷ್ಟರ ಮಟ್ಟಿನ ಮರ್ಯಾದೆಗೂ ಅರ್ಹನೆ? ಏತಕ್ಕಾಗಿ ಇಲ್ಲಿತನಕ ಬಂದುಬಿಟ್ಟೆ? ನಾನೆ ಅಲ್ಲಿಗೆ ಬರುತಿದ್ದೆನಲ್ಲ? ಅದೂ ಅಲ್ಲದೆ ಯಾವನಂಟರೊಳಗೆ ನಮಗೆ ಇಂತಹ ಮರ್ಯಾದೆಯೂ ಬೇಕಾಗಿದೆಯೆ?

(ಕೌರವನು ತಲೆಬಾಗಿ ಮೌನದಿಂದಿರುವನು.)

**ಭೀಷ್ಮ**—ಎಲೈ ಮಾಧವ! ನಿನ್ನ ಚರಣಕಮಲಗಳ ದರುಶನದಿಂದ ನಾವೆಲ್ಲರೂ ಪವಿತ್ರರಾದೆವು. ನಮ್ಮ ಪಾಪಕೋಟಿಗಳೆಲ್ಲವೂ ಇಂದಿಗೆ ನಾಶವಾದಂತಾಯಿತು. ಈ ಪೀಠವನ್ನಲಂಕರಿಸೋಣಾಗಲಿ.

**ಕೃಷ್ಣ**—ಕುರುಕುಲಾಗ್ರಣಿಯೆ, ಇದೇನು ಮೌನವಾಗಿರುವೆ? ಮಾತನಾಡಬಾರದೆ?

**ಸುಯೋ**—ನಾನೇನು ಮಾತನಾಡಲಿ? ಹಸ್ತಿನಾವತಿಗೆ ಬಂದವನು ನಮ್ಮಲ್ಲಿಗೇಕೆ ಬಾರದೆ ಹೋದೆ? ಬೇಕಾದ ಏರ್ಪಾಡು ಮಾಡಿಸಿದ್ದೆನಲ್ಲ?

**ಕೃಷ್ಣ**—ಇದಕ್ಕಾಗಿ ಮನಸ್ತಾಪ ಪಡಬೇಡ. ಇದೊಂದು ಘನವಾದ ಕಾರ್ಯವಲ್ಲ.

**ಸುಯೋ**—ಚಿಂತಿಲ್ಲ, ನಾವು ಪಾಂಡವರ ಶತ್ರುವೆಂದೆ ಇರಲಿ. ನಮ್ಮಲ್ಲಿಗೆ ಬರಬಾರದು. ಭೀಷ್ಮಾಚಾರ್ಯರು, ದ್ರೋಣಾಚಾರ್ಯರು, ಕೃಪಾಚಾರ್ಯರು ಮೊದಲಾದವರಿರಲಿಲ್ಲವೆ? ಅವರಲ್ಲಿಯಾದರೂ ಉಳಿದುಕೊಳ್ಳಬಾರದಿತ್ತೆ?

**ಕೃಷ್ಣ**—ಎಲ್ಲಿಯಾದರೇನು? ವಿದುರನೂ ನಮಗೆ ತುಂಬ ಬೇಕಾದವನು.

**ಸುಯೋ**—ಗೋವಳಿಗತನವು ಚೆನ್ನಾಗಿ ಕಂಡುಬರುತ್ತಿದೆ. ನೀಚಕುಲದ ದಾಸೀಪುತ್ರನಾದ ವಿದುರನ ಮನೆಯಲ್ಲಿ ಭೋಜನವಾಡಿದೆ! ಎಷ್ಟೆಂದರೂ ನಂದಗೋಪನ ಸಾಕಣೆ ಮಗನಲ್ಲವೆ? ಏತಕ್ಕಾಗಿ ರಾಜನೀತಿ ಹೇಳುವುದಕ್ಕೆ ವಹಿಸಿಕೊಂಡೆಯೊ, ಕಾಣೆ!

**ಕೃಷ್ಣ**—ಹಾಗೆಯೆ? ಕೇಳು. ಒಂದೇ ಪ್ರಿಯರಾದವರಲ್ಲಿ ಭೋಜನ ಮಾಡಬೇಕು. ಇಲ್ಲವೆ ಜ್ಞಾನಿಗಳೊಡನೆ ಭೋಜನಮಾಡಬೇಕು. ನೀನು ನಮಗೆ ಪ್ರಿಯನಂತೂ ಅಲ್ಲ! ಜ್ಞಾನಿಗಳು ನಿನ್ನಲ್ಲಿ ಮೊದಲೆ ಇಲ್ಲ! ಮತ್ತೆ ಹೇಗೆ ತಾನೆ ನಾನು ನಿನ್ನಲ್ಲಿಗೆ ಬರಲಿ?

**ಸುಯೋ**—'ಸಮಾನ ಶೀಲ ವ್ಯಸನೇಷು ಸಖ್ಯಂ'—ಎಂದಿರುವುದು. ಗೋವಳನಿಗೂ ದಾಸೀಪುತ್ರನಿಗೂ ಬಹಳ ಮಿತ್ರತ್ವವಲ್ಲವೆ?

**ವಿದು**—ಎಲಾ ದುರ್ಯೋಧನ! ಐಶ್ವರ್ಯವಿದೆಯೆಂಬ ದುರಹಂಕಾರದಿಂದ ಪೂರ್ವಾಪರ ವಿಚಾರವಿಲ್ಲದೆ ಬಾಯಿಗೆ ಬಂದಂತೆ ಒದರುವೆಯಲ್ಲವೆ? ಇದೊ, ನೋಡು—ಭೀಮನು ನಿನ್ನನ್ನು ಮುರಿದು ಕೆಡಹುವಾಗ ನಿನ್ನ ಪ್ರಾಣರಕ್ಷಣೆಯ ಸಲುವಾಗಿ ಇದೊಂದು ಧನುಸ್ಸನ್ನು ಇದುವರೆಗೂ ಜೋಪಾಸನ ಮಾಡಿಕೊಂಡಿದ್ದೆನು. ಇದೊ, ನಿನ್ನಿದಿರಿಗೆನೆ ಅದನ್ನು ಮುರಿದುಬಿಡುತ್ತೇನೆ. ಇನ್ನು ಮುಂದೆ ನಿನಗಾಗಿ ನಾನು ಶರಸನ್ಯಾಸವನ್ನು ಬಿಟ್ಟುಬಿಟ್ಟರೆ ನಾನು ವಿದುರನೆ ಅಲ್ಲ!

**ಕೃಷ್ಣ**—ಕೌರವ! ಶತ್ರುಗಳನ್ನು ಮನೆಯಲ್ಲಿಟ್ಟುಕೊಂಡಿರಬಾರದು; ಶತ್ರುಗಳೊಡನೆ ಊಟ ಮಾಡಬಾರದು. ಇದು ರಾಜನೀತಿ! ನೀನು ಎಷ್ಟಾದರೂ ಪಾಂಡವರಿಗೆ ವೈರಿಯಾದ ಮೇಲೆ ನನಗೂ ವೈರಿಯಾದೆ. ನಿನ್ನಲ್ಲಿ ನಾನು ಹೇಗೆ ಊಟಮಾಡಲಿ?

**ಸುಯೋ**—ಅದು ಹಾಗಿರಲಿ. ಈಗ ನೀನು ಬಂದಿರುವ ಕಾರ್ಯ ವನ್ನು ಹೇಳಬಾರದೆ?

**ಕೃಷ್ಣ**—ಹಾಗಾದರೆ ಕೇಳು. ಪಾಂಡವರ ಅಜ್ಞಾತವಾಸದ ಅವಧಿಯು ಸವೆದುಹೋಯಿತು. ಇನ್ನು ನೀನು ಅವರನ್ನು ಕೂಡಿ ಕೊಂಡು ಸುಖವಾಗಿರುವುದು ಅತ್ಯುತ್ತಮವಾದ ಕಾರ್ಯ. ಅವರಿಗೆ ಅರ್ಧರಾಜ್ಯವನ್ನು ಕೊಟ್ಟುಬಿಡು. ಈ ಭೂಮಿಗೋಸ್ಕರ ಆಸೆ ಪಡಬೇಡ. ಇದು ಕೇವಲ ಅಸ್ಥಿರವಾದುದು. ಅದರಲ್ಲಿಯೂ ಐಶ್ವರ್ಯವು ಹೆಚ್ಚಿದ ಹಾಗೆಲ್ಲ ದೃಷ್ಟಿಯು ಮಂದವಾಗುತ್ತ ಬರುತ್ತಿದೆ. ಇದು ಈಗಿನ ಅರ ಸರ ಲಕ್ಷಣ. ಸ್ವಾಮಿ, ಅಮಾತ್ಯ, ಸುಹೃತ್, ಕೋಶ, ರಾಷ್ಟ್ರ, ಬಲ, ದುರ್ಗ—ಇವೇ ಸಪ್ತಾಂಗಗಳು. ಇವುಗಳಲ್ಲಿ ನಿನಗೇನೂ ಕೊರತೆಯಿಲ್ಲ. ಅದರಲ್ಲಿಯೂ ಪಾಂಡವರ ಸ್ನೇಹವನ್ನು ಸಂಪಾದಿಸಿಕೊಂಡು ಬಿಟ್ಟರೆ ನಿನ್ನಂತಹ ಅರಸರೆ ಲೋಕದಲ್ಲಿಲ್ಲವೆಂದಾಗುತ್ತಿದೆ. ಆವಾತನಲ್ಲಿ ಸಪ್ತಾಂಗ ಗಳು ಸರಿಯಾಗಿಲ್ಲವೊ ಅಂತಹ ಅರಸನ ಬಾಳುವೆ ಸ್ಥಿರವಲ್ಲ. ಇದನ್ನೆಲ್ಲ ನಿನ್ನ ಗುರುಹಿರಿಯರು ನಿನಗೆ ಹೇಳುವುದಕ್ಕೆ ಅಂಜುವರು. ಒಂದು ವೇಳೆ ಅವರು ಹೇಳಿದರೂ ನೀನು ಕೇಳುವಂತಹನಲ್ಲ! ಇಷ್ಟು ಚತುರುಪಾಯ ಗಳಲ್ಲಿ ಸಾಮವೆಂಬುದು ರಾಜನೀತಿಯ ಬೀಜಮಂತ್ರ. ಸಾಮ ತಪ್ಪಿ ದರೆ ನೀತಿ ತಪ್ಪಿದಂತೆಯೆ ಸರಿ. ದಂಡೋಪಾಯವು ಕೇವಲ ಅಪಾಯ ಕರ. ಆದುದರಿಂದ ಅರಸನಾದವನು ದಂಡೋಪಾಯವನ್ನು ಸಾಧ್ಯ ವಾದ ಮಟ್ಟಿಗೂ ವರ್ಜಿಸಬೇಕು. ನೀನೇನೊ ಪಾಂಡವರಿಗೆ ಹಲವು ವಿಧವಾದ ಅಪರಾಧವನ್ನು ಮಾಡಿರಬಹುದು. ಅವೆಲ್ಲವನ್ನೂ ಅವರೆಣಿಸು ವವರಲ್ಲ. ಆದುದರಿಂದ ನೀನು ಅವರನ್ನೊಡಗೂಡಿ ಸುಖವಾಗಿ ಬಾಳ ಬಹುದು. ನಿನ್ನಂತಹ ಅರಸರೆ ಪೃಥ್ವಿಯಲ್ಲಿಲ್ಲವೆಂದೆನ್ನಿಸಿಕೊಳ್ಳಬಹುದು. ಭೀಷ್ಮಾಚಾರ್ಯರೆ ಮೊದಲಾದವರು ಕೂಡ ಹೀಗೆಯೆ ಅಭಿಪ್ರಾಯ ಪಡದಿರಲಾರರು. ಬೇಕಾದರೆ ನೀನೆ ಅವರನ್ನು ಕೇಳಿಕೊ.

**ಭೀಷ್ಮ**—ಕೃಷ್ಣನು ಹೇಳುವ ಮಾತು ಸಹಜವೆ ಸರಿ. ಸುಯೋ ಧನ! ವ್ಯರ್ಥವಾಗಿ ಗರ್ವಪಟ್ಟು ಕೆಟ್ಟು ಹೋಗಬೇಡ. ಕೃಷ್ಣನು ಮಹಾ ಕಾರಣಿಕ ಪುರುಷನೆಂಬುದನ್ನು ಮರೆತೆಯಾ?

**ದ್ರೋಣ**—ಸುಯೋಧನ, ಆಚಾರ್ಯರೆಂದಂತೆಯೆ ಮಾಡು. ಕೃಷ್ಣನ ಮಹತ್ವಿಕೆಯನ್ನು ಅರಿಯೆಯು? ಆತನ ಗುರುದಕ್ಷಿಣೆಯನ್ನಾದರೂ ಜ್ಞಾಪಿಸಿಕೊ. ಅಂತಹ ಸಾಹಸವು ನಮ್ಮೊಳಗಾರಲ್ಲಿರುವುದು?

**ಕೃಷ್ಣ**—ಕೌರವ, ಇವರಿಗಂತೂ ಉಭಯ ಪಕ್ಷದವರೂ ಸಮಾನರು. ಪಕ್ಷಪಾತವಿಲ್ಲದೆ ಹೇಳುತ್ತಾರೆ. ಅವರ ಮಾತನ್ನು ಉಲ್ಲಂಘಿಸಬೇಡ.

**ಸುಯೋ**—ಕೃಷ್ಣ! ಪಾಂಡವರು ನಿನ್ನನ್ನು ರಾಜಕಾರ್ಯ ನಿರ್ವಹಿಸಿ ಕಳುಹಿದುದು ಕೇವಲ ಮರುಳುತನವೇ ಸರಿ! ಸರಸವಾಡುವುದಕ್ಕಾಗಿದ್ದರೆ ಚೆನ್ನಾಗಿತ್ತು. ಅವರಿಗೆಲ್ಲರ ಸಹಾಯವೂ ಇದೆ; ನಮಗೆ ಮಾತ್ರವಿಲ್ಲ! ಸುಮ್ಮನೆ ಸಂಧಿಯ ಮಾತನ್ನೆತ್ತಿ ಪರಿಹಾಸ ಮಾಡಬೇಡ.

**ಕೃಷ್ಣ**—ಬೇಡ, ನಿನಗೆ ಸಾರಿ ಹೇಳುತ್ತೇನೆ. ಪಾಂಡವರನ್ನು ಸೇರಿರುವುದೆ ಉಚಿತ. ಖೂಳರ ಬಲೆಗೆ ಸಿಲುಕಬೇಡ. ನಿಮ್ಮ ಕುಲವು ತುಂಬ ವಿಖ್ಯಾತವಾದುದು! ಅದಕ್ಕೆ ಕಳಂಕವನ್ನು ತಂದು ಹಾಕಬೇಡ. ಪಾಂಡವರು ನಿನ್ನಲ್ಲಿ ಪ್ರೇಮದಿಂದಲೆ ವರ್ತಿಸುವರು; ಅದಕ್ಕೇನೂ ಸಂದೇಹವಿಲ್ಲ. ಇಂದ್ರಪ್ರಸ್ಥವನ್ನು ಅವರಿಗೆ ಕೊಟ್ಟು ಪಾಂಡವಪ್ರತಿಷ್ಠಾಚಾರ್ಯನೆಂಬ ಬಿರುದನ್ನು ಧರಿಸಿಕೊ. ಆಗ ನಿನ್ನಂತಹ ಅರಸರೆ ಇಲ್ಲವೆಂದಾಗುತ್ತದೆ.

**ಸುಯೋ**—ನಿಮ್ಮ ಪಾಂಡವರ ಪ್ರೇಮವೆಲ್ಲ ನಿಮ್ಮಲ್ಲಿಯೆ ಇರಲಿ. ಅಷ್ಟು ಪ್ರೇಮವಿರುತ್ತಿದ್ದರೆ ಅರ್ಧರಾಜ್ಯ ಕೇಳುತಿದ್ದರೆ? ಸಿಂಹದ ಹೊಟ್ಟೆಯಲ್ಲಿ ನರಿ ಹುಟ್ಟಿದಂತಾಯಿತು! ಕ್ಷತ್ರಿಯರಾಗುತಿದ್ದರೆ ಹೇಡಿಗಳಂತೆ ಯುದ್ಧಕ್ಕೆ ಹಿಂಜರಿಯುತ್ತಿರಲಿಲ್ಲ. ಸಾಮರ್ಥ್ಯವಿದ್ದರೆ ಸಂಗ್ರಾಮಕ್ಕೆ ಬರಲಿ! ಸಂಧಾನವಾಗುವ ಹಾಗಿಲ್ಲ. ಅದಲ್ಲದೆ ನಮ್ಮ ದುಶ್ಶಾಸನನು ಇದಕ್ಕೆಷ್ಟು ಮಾತ್ರಕ್ಕೂ ಸಮ್ಮತಿಸಲೊಲ್ಲನು.

**ದುಶ್ಶಾ**—ಎಲ್ಲಿಯಾದರೂ ಅಂಧಕಾರವು ಸೂರ್ಯನನ್ನು ಸೇರುವುದುಂಟೆ? ಪಾಂಡವರಿಗೂ ನಮಗೂ ಹೇಗೆ ಸರಿಬಿದ್ದೀತು? ಸಂಗ್ರಾಮವೆ ಸರಿ!

**ಕೃಷ್ಣ**—ಚಂದ್ರವಂಶಕ್ಕೆ ಕಳಂಕ ಬರುವ ಸಂಭವ ಬಂದುಬಿಟ್ಟಿತು. ಇವರ ಗುಣದೋಷಗಳು ನಿಮಗೆ ಸಂಬಂಧಿಸುತ್ತವೆ. ಪಾಂಡವರನ್ನು ಸೇರಿರುವುದೆ ಯುಕ್ತ.

**ಭೀಷ್ಮ**—ಸುಯೋಧನ, ಕೃಷ್ಣನ ಮಾತನ್ನು ಉಲ್ಲಂಘಿಸಬೇಡ. ನಾವೆಲ್ಲರೂ ಸಮರ್ಥರೆ ಅಹುದು. ಆದರೆ ದೈವಬಲ ತಪ್ಪಿದ ಬಳಿಕ ನಮ್ಮ ಸಾಹಸವೆಲ್ಲ ನಿಷ್ಪ್ರಯೋಜನವೆ ಸರಿ. ಸೀತೆಯನ್ನು ಕದ್ದೊಯ್ದ ರಾವಣನೇನು ಸಾಮಾನ್ಯನೆ? ಆತನ ಅವಸ್ಥೆಯನ್ನಾದರೂ ಕೊಂಚ ಭಾವಿಸಿ ನೋಡು.

**ದ್ರೋಣ**—ಸುಯೋಧನ, ಪಾಂಡವರು ಸಾಮಾನ್ಯ ಬಲರೆಂದೆಣಿಸಬೇಡ! ಚಿತ್ರಸೇನನ ಸಂಗತಿಯನ್ನು ಜ್ಞಾಪಿಸಿಕೊ. ಮೊನ್ನೆ ಗೋಗ್ರಹಣದಲ್ಲಿ ನೋಡಲಿಲ್ಲವೆ? ಇನ್ನು ಸಂಧಾನಕ್ಕೆ ಬಂದ ಈ ಕೃಷ್ಣನ ಸಾಮರ್ಥ್ಯವನ್ನು ನೀನೆ ಬಲ್ಲೆ. ವ್ಯರ್ಥವಾಗಿ ಕೆಟ್ಟುಹೋಗಬೇಡ. ಸಂಧಾನಕ್ಕನುವಾಗು.

**ಸುಯೋ**—ದೈವಬಲವೂ ಬಾಹುಬಲವೂ ಅವರಲ್ಲಿಯೆ ಇರಲಿ. ಅವರನ್ನು ನಾಶಮಾಡಬೇಕೆಂದು ನಾನೆಷ್ಟೊ ಸಲ ಯತ್ನಿಸಿದೆನು. ಆದರೆ ಸಾಧ್ಯವಾಗಲಿಲ್ಲ. ಕೊನೆಗೆ ದ್ಯೂತದ ನೆವದಿಂದ ಹೇಗಾದರೂ ಅಡವಿಗಟ್ಟಿದೆನು. ಈಗ ಪುನಃ ಅವರಿಗೆ ಅಡವಿಯೆ ಗತಿಯಲ್ಲದೆ ರಾಜ್ಯವು ಎಷ್ಟು ಮಾತ್ರಕ್ಕೂ ಸಿಕ್ಕುವ ಹಾಗಿಲ್ಲ.

**ಕೃಷ್ಣ**—ವನವಾಸದಿಂದ ಅವರಿಗೇನೂ ಕುಂದುಂಟಾಗಲಿಲ್ಲ. ಬಲ್ಲೆಯಾ? ಸತ್ಯಚ್ಯುತರಾದರೆ ಅಪಕೀರ್ತಿ ಬರುವುದೆಂಬ ಭೀತಿಯಿಂದ ಕಾಡಿಗೆ ಹೋದರು. ಈಗ ನೀನು ರಾಜ್ಯ ಕೊಡುವುದಿಲ್ಲವೆಂದರೆ ಭೀಮನು ಎಷ್ಟು ಮಾತ್ರಕ್ಕೂ ಬಿಡುವ ಹಾಗೆ ಕಾಣುವುದಲ್ಲ. ಅದು ಹಾಗಿರಲಿ! ಅರ್ಧ ರಾಜ್ಯ ಬೇಡ! ಐವರಿಗೆ ಐದು ಗ್ರಾಮಗಳನ್ನಾದರೂ ಕೊಡು. ಇಂದ್ರಪ್ರಸ್ಥ, ಯಮಪ್ರಸ್ಥ, ಅವಂತಿ, ವಾರಣಾವತಿ, ಹಸ್ತಿನಾವತಿ—ಇವುಗಳನ್ನು ಕೊಟ್ಟರೆ ಸಾಕು. ಅವರನ್ನು ಹೇಗಾದರೂ ಸಂತುಷ್ಟರಾಗುವಂತೆ ಮಾಡುತ್ತೇನೆ.

**ಸುಯೋ**— ಇಂದ್ರಪ್ರಸ್ಥವು ದ್ರೋಣಾಚಾರ್ಯರಿಗಾಯಿತು. ಯಮಪ್ರಸ್ಥವು ಕೃಪಾಚಾರ್ಯರಿಗಾಯಿತು. ಅವಂತಿಯಲ್ಲಿ ಭೀಷ್ಮಾಚಾರ್ಯರಿದ್ದಾರೆ. ವಾರಣಾವತಿಯನ್ನು ಕರ್ಣನಿಗೆ ಕೊಟ್ಟಿದ್ದೇನೆ. ಹಸ್ತಿನಾವತಿಯಲ್ಲಿ ನಾನೇ ಇದ್ದೇನೆ. ಆದುದರಿಂದ ಅವರಿಗೇನೂ ಸಿಕ್ಕುವ ಸಂಭವವಿಲ್ಲ!

**ಕೃಷ್ಣ**—ಹೋಗಲಿ! ನಿನಗಿಷ್ಟ ಬಂದ ಐದು ಊರುಗಳನ್ನು ಕೊಡು. ನಾನವರನ್ನು ಸಮಾಧಾನಮಾಡುತ್ತೇನೆ.

**ಸುಯೋ**—ಹೇಗೆ ಕೊಡಲಿ? ಅಂದು ಬಲಿಯು ಮೂರೆ ಮೂರಡಿ ಭೂಮಿಯನ್ನು ಕೊಟ್ಟು ಆತನಿಗೆ ಪಾತಾಳವಾಸವು ಪ್ರಾಪ್ತವಾಯಿತು. ಈಗ ನಾನು ಐದು ಗ್ರಾಮಗಳನ್ನು ಕೊಟ್ಟುಬಿಟ್ಟರೆ ನನ್ನ ಅವಸ್ಥೆಯು ಹೇಗಾಗುವುದೋ ಹೇಳುವುದಕ್ಕೆ ಬಾರದು! ಕೃಷ್ಣ, ನಿನಗೊಂದು ನಮಸ್ಕಾರ! ಬಂದ ಹಾದಿ ಹಿಡಿದುಕೊಂಡು ಹೋಗಬಹುದು.

**ವಿದು**—ಸುಯೋಧನ, ಈ ಕೃಷ್ಣನು ಸಾಕ್ಷಾತ್ ಶ್ರೀಮನ್ನಾರಾಯಣನು. ಭೀಷ್ಮಾಚಾರ್ಯರು ಕುರುಕುಲದ ಹಿರಿಯರು. ದ್ರೋಣಾಚಾರ್ಯರು ಗುರುಗಳು. ಇಂತಹ ಮಹಾನುಭಾವರುಗಳ ಮಾತನ್ನು ಉಲ್ಲಂಘಿಸುವುದು ಕೇವಲ ಅನುಚಿತ! ಸಂಧಾನಕ್ಕನುವಾಗು.

**ಕೃಷ್ಣ**—ಅವುದಾದರೂ ಒಂದು ಗ್ರಾಮವನ್ನಾದರೂ ಕೊಡಲಾರೆಯಾ?

**ಸುಯೋ**—ಇಲ್ಲ! ಒಂದು ಗ್ರಾಮವಲ್ಲ! ಸೂಜಿಯ ಮೊನೆ ಊರುವಷ್ಟು ಕೂಡ ಸ್ಥಳ ಸಿಕ್ಕಲಾರದು! ಅವರು ಸಂಗ್ರಾಮಕ್ಕೆನೆ ಬರಲಿ!

**ಕೃಷ್ಣ**—ಸುಯೋಧನ, ಕೊಂಚ ಯೋಚಿಸಿನೋಡು.

**ಸುಯೋ**—ನಿನಗೆ ಗೋಸೇವೆಯನ್ನು ಮಾಡುವುದಕ್ಕಿಲ್ಲವೆ? ಏತಕ್ಕಾಗಿ ನಮ್ಮ ಆಸ್ಥಾನಕ್ಕೆ ಬಂದೆ? ರಾಜನೀತಿ ಏತಕ್ಕೆ? ಮಾಗಧನಿಗೆ ಹೆದರಿಕೊಂಡು ಸಮುದ್ರದ ನಡುವೆ ಅಡಗಿಕೊಂಡೆ! ಈಗ ಮಾತ್ರ ನನಗೆ ರಾಜನೀತಿ ಹೇಳುವುದಕ್ಕೆ ಬಂದೆಯಲ್ಲವೆ? ಚೆನ್ನಾಯಿತು! ಚೆನ್ನಾಯಿತು!

**ವಿದು**—(ಸ್ವಗತ) ಈತನಿಗೇನೊ ಅವಸಾನಕಾಲ ಪ್ರಾಪ್ತವಾಗಿ ಭಾನುಮತಿಯ ಓಲೆಭಾಗ್ಯವು ಇಂದಿಗೆ ತೀರಿತು. ಇನ್ನು ಧೃತರಾಷ್ಟ್ರ ಅನಾಥನಾದನು. ಇದಕ್ಕೇನಾದರೂ ಉಪಾಯವಮಾಡಬೇಕು.

(ದ್ರೋಣ ಭೀಷ್ಮರಿಗೆ ಸನ್ನೆಮಾಡುವನು. ಮೂವರೂ ಒಂದೆಡೆ ಸೇರುವರು. ಅವರರಿಯದಂತೆ ದುಶ್ಯಾಸನನು ಹಿಂದುಗಡೆ ಹೊಂಚುಹಾಕುತ್ತಿರುವನು).

**ವಿದು**—ಆಚಾರ್ಯರೆ, ಏನು ಮಾಡೋಣ?

**ಭೀಷ್ಮ**—ಸುಯೋಧನನ ಮೇಲೆ ಬಲಪ್ರಕಾಶಮಾಡಬೇಕು.

**ವಿದು**—ಹೇಗೆ?

**ದ್ರೋಣ**—ಕಟ್ಟಿಹಾಕಿ ಗಾಂಧಾರಿಯ ಬಳಿಗೆ ಕರೆದುಕೊಂಡು ಹೋಗೋಣವೆ?

**ಭೀಷ್ಮ**—ಹಾಗೆಯೆ ಸರಿ. ಧೃತರಾಷ್ಟ್ರನನ್ನು ಕೇಳೋಣ.

**ದುಶ್ಯಾ**—ಅಣ್ಣಯ್ಯ, ನಿನ್ನನ್ನು ಕಟ್ಟಿಹಾಕುವ ಯೋಚನೆ ಮಾಡುತಿದ್ದಾರೆ.

**ಸುಯೋ**—ಹಾಗೆಯೆ? ಎಲ್ಲಿ? ಹಗ್ಗ ತೆಗೆದುಕೊಂಡು ಬಾ! ಆ ಕಳ್ಳ ಕೃಷ್ಣನನ್ನು ಕಟ್ಟಿಬಿಡೋಣ! ಪಾಂಡವರ ಅಹಂಕಾರವೆಲ್ಲ ಸ್ತಬ್ಧವಾಗುತ್ತೆ!

**ಭೀಷ್ಮ**—ರಾಯಭಾರಿಗಳನ್ನು ಕಟ್ಟುವುದು ಆವ ರಾಜನೀತಿ?

**ಶಕುನಿ**—ಗೋವಳರಿಗೆ ನೀತಿಯೆ ಬೇರೆ!

**ಕೃಷ್ಣ**—ಭೀಷ್ಮಾಚಾರ್ಯರೇ, ಚಂದ್ರಕಿರಣಗಳಿಗೆ ಚಂದ್ರಕಾಂತವು ಕರಗೀತಲ್ಲದೆ, ಕೈಲವು ಕರಗೀತೆ! ನಿಮ್ಮ ಮೊಮ್ಮಗನು ನನ್ನನ್ನು ಕಟ್ಟಿಹಾಕುವ ಯೋಚನೆಯಲ್ಲಿದ್ದಾನಂತೆ! ದೂತರನ್ನು ಕಟ್ಟಿಸುವುದು ಆವ ರಾಜನೀತಿ? ಆದರೆ ನಮಗೇನೂ ಭಯವಿಲ್ಲ!

**ಭೀಷ್ಮ**—ಧೃತರಾಷ್ಟ್ರಾ, ನಿನ್ನ ಮಗನ ಬುದ್ಧಿ ನೋಡಿದೆಯ? ಶ್ರೀ ಪರಮಾತ್ಮನನ್ನೆ ಕಟ್ಟಿಸುತ್ತಾನಂತೆ!

**ಧೃತ**—ಎಲೈ ಮಗನೆ, ರಾಕ್ಷಸಾಂತಕನಾದ ಈ ಕೃಷ್ಣನನ್ನು ಕಟ್ಟುವೆಯು? ನಿನ್ನಲ್ಲಿ ಸಾಮರ್ಥ್ಯವಿರುವುದೆ? ನೀನು ಮಾಡತೊಡಗಿದ ಕಾರ್ಯವನ್ನು ಕೊಂಚ ಯೋಚಿಸಿ ನೋಡು! ಈ ಕೃಷ್ಣನಾರು? ವಸು ದೇವನಾರು? ಯಾದವರು ನಮಗೆ ತುಂಬ ಬೇಕಾದವರಲ್ಲವೆ? ಸುಮ್ಮನೆ ಕುಲಕ್ಕೆ ಕುಂದು ತರಬೇಡ!

**ವಿದುರ**—ಎಲೈ ರಾಜನೆ, ಏತಕ್ಕಾಗಿ ನಿಮ್ಮ ನಿಮ್ಮ ಸಂಬಂಧ ವನ್ನು ಹೇಳಿಕೊಳ್ಳುತ್ತ ಮೂರ್ಖನಾದ ನಿನ್ನೀ ಮಗನನ್ನು ಪ್ರಾರ್ಥಿಸುವೆ? ನಾಯಿ ಬೊಗಳಿದರೆ ದೇವಲೋಕ ಹಾಳಾದೀತೆ? ನರಿಯ ಕೂಗಿಗೆ ಸಿಂಹವು ಬೆದರಿದುದನ್ನು ಎಲ್ಲಿಯಾದರೂ ಕೇಳಿ ಬಲ್ಲೆಯ? ಒಳ್ಳೆಯು ಕೊಬ್ಬಿದ್ದರೂ ಗರುಡನಿಗೆ ಸಾಟಿಯಲ್ಲ! ನಿನ್ನ ಮಕ್ಕಳ ದುರುಳತನಕ್ಕೆ ಈ ಶ್ರೀಕೃಷ್ಣನು ಅಂಜುವನೆಂದೆಣಿಸಬೇಡ. ಈತನು ಕೇವಲ ಮನುಷ್ಯಮಾ ತ್ರನಲ್ಲ. ಭವನಾಗಿದ್ದುಕೊಂಡು ಅಭವನಾಗಿಯೂ, ಚರನಾಗಿದ್ದುಕೊಂಡು ಅಚರನಾಗಿಯೂ, ಸಗುಣನಾಗಿದ್ದರೂ ಅಗುಣನಾಗಿಯೂ, ಏಕನಾಗಿದ್ದು ಅನೇಕನಾಗಿಯೂ, ಕ್ಷರನಾಗಿದ್ದುಕೊಂಡು ಅಕ್ಷರನಾಗಿಯೂ ಆವಾತನು ಮೆರೆಯುವನೊ ಅಂತಹ ಪರಮಾತ್ಮನೆ ಈತನು! ಮಧುಕೈಟಭ, ಪೌಂಡ್ರಕ, ಹಂಸ, ಡಿಬಿಕ—ಮೊದಲಾದ ದೈತ್ಯರನ್ನು ಈತನೆ ಕೊಂದವನು. ಲೋಕ ವೆಲ್ಲವೂ ಜಲಮಯವಾಗಲು ವಟಪತ್ರಶಾಯಿಯಾಗಿದ್ದವನು ಆರೆಂದೆಣಿ ಸಿರುವೆ? ಗಿರಿಗಹ್ವರಗಳಲ್ಲಿ ವಾಸಮಾಡಿಕೊಂಡು ಪರ್ಣಾಶನದಿಂದ ಶರೀರ ಪೋಷಣಮಾಡುತ್ತ, ಸರ್ವದಾ ಧ್ಯಾನದಲ್ಲಿಯೆ ನಿರತರಾಗಿರುವ ಆ ಪುಣ್ಯಪುರುಷರಿಗೆ ಕೂಡ ಈ ಮಹಾತ್ಮನ ಸಂದರ್ಶನವು ಕೇವಲ ದುರ್ಲಭ! ಅಂತಹ ಮಹಾತ್ಮನನ್ನು ಕುಲಘಾತುಕರಾದ ನಿನ್ನೀ ಮಕ್ಕಳಿಂದ ಕಟ್ಟು ವುದಕ್ಕೆ ಸಾಧ್ಯವೆ?

**ಧೃತ**—ಆಹಾ! ಈ ಕೃಷ್ಣನ ಅಪಾರವಾದ ಮಹಿಮೆಯನ್ನು ನನ್ನೀ ದುಷ್ಪುತ್ರರು ಈಗ ತಾನೆ ಕೇಳಿದರಲ್ಲವೆ? ಅಂತಹ ಮಹಾತ್ಮನನ್ನು ಬಂಧಿಸುವುದಕ್ಕೆ ಆರಂಭಿಸಿದ ಈ ನೀಚರಿಗೆ ಆವ ರೌರವ ಪ್ರಾಪ್ತವಾಗು ವುದೋ? ಮಗನೆ, ಇನ್ನಾದರೂ ಸಂಧಾನವನ್ನನುಗೊಳಿಸಲಾರೆಯು?

**ಸುಯೋ**—ಪಿತನೆ, ಭಯಪಡಬೇಡ. ಪರಮಾತ್ಮನು ಸರ್ವಾಂತ ರ[illegible]. ಆತನೆ ನನ್ನ ಹೃದಯದೊಳಗೂ ಇದ್ದುಕೊಂಡು ಸಂಧಿ

ಮಾಡಕೂಡದೆಂದು ಹೇಳಿಸುತ್ತಾನೆ! ಇಲ್ಲದೆ ಹೋದರೆ ಮಾನವ ಮಾ
ರಾವವರಿಗೆ ಅಳಿಸುವುದಕ್ಕೂ ಉಳಿಸುವುದಕ್ಕೂ ಎಲ್ಲಿನ ಸ್ವಾತಂತ್ರ್ಯವಿ
ವುದು? ಇನ್ನು ಆ ಭಯವನ್ನು ಬಿಟ್ಟುಬಿಡು. ನಾನು ಸತ್ತರೂ ಈ
ಕೈಯಿಂದಲೆ ಸಾಯುವೆನೆ ಹೊರತು ಎಂದಿಗೂ ಅಪಕೀರ್ತಿ ತಂದುಕೊ
ಲಾರೆ! ಆದುದರಿಂದ ಸಂಧಾನವು ಎಂದಿಗೂ ಆಗಲಾರದು! ಆ ವಿಷಯದ
ನಿಶ್ಚಿಂತನಾಗಿರು!

**ಕೃಷ್ಣ**—ರಾಜನೆ, ಏತಕ್ಕಾಗಿ ಕಿವುಡನಿಗೆ ಸಂಗೀತ ಹೇಳುವೆ?

**ಸುಯೋ**—ದುಶ್ಶಾಸನ, ಏನು ನೋಡುತ್ತಿರುವೆ? ಆ ಖೂಳನ
ಬಿಗಿದುಬಿಡು!

(ದುಶ್ಶಾಸನನು ಕರ್ಣನನ್ನು ಬಿಗಿಯುವುದಕ್ಕೆ ಹೋಗುವನು.)

**ಕರ್ಣ**—ದುಶ್ಶಾಸನ, ನನ್ನನ್ನೇಕೆ ಬಿಗಿವೆ?

**ದುಶ್ಶಾ**—ಕರ್ಣನೆ! ಏನಿದು? ಅಣ್ಣಯ್ಯ, ಎಲ್ಲರೂ ಕೃಷ್ಣನ
ಕಾಣಿಸುತ್ತಿರುವರಲ್ಲ! ಆರನ್ನು ಬಂಧಿಸಲಿ?

**ವಿದುರ**—ಪರಮಾತ್ಮನ ಮಹಿಮೆಯು ಅಪಾರವಾದುದೆ ಸರಿ!

**ಸುಯೋ**—ಆ ಖೂಳನು ತನ್ನ ಇಂದ್ರಜಾಲವನ್ನು ಪ್ರದರ್ಶಿಸು
ನಲ್ಲವೆ? ನೋಡೋಣ, ಕೊಂಚ ಸಾವಕಾಶವಾಡು!

**ಕೃಷ್ಣ**—ಇಂದ್ರಜಾಲವೆ? (ವಿಶ್ವರೂಪದರ್ಶನ)

— ಸಂಪೂರ್ಣ —

